# ಜನಾಂದೋಲನಗಳ ಉಗಮ

ಭಾರತಕ್ಕೆ ಸ್ವಾತಂತ್ರ್ಯ ದೊರೆತು ಮೂರು ದಶಕಗಳಾದ ನಂತರ ಜನರಲ್ಲಿ ಅಸಹನೆ ಪ್ರಾರಂಭಗೊಂಡು, ಅದು ಬೇರೆ ಬೇರೆ ರೂಪಗಳಲ್ಲಿ ಪ್ರಕಟವಾಗತೊಡಗಿತು. ಹಿಂದಿನ ಅಧ್ಯಾಯದಲ್ಲಿ ನಾವು ಚುನಾವಣಾ ವಿಪ್ಲವಗಳು ಮತ್ತು ರಾಜಕೀಯ ಬಿಕ್ಕಟ್ಟುಗಳನ್ನು ಕುರಿತು ನೋಡಿದೆವು. ಆದರೆ ಜನತೆಯ ಅಸಮಾಧಾನವು ಕೇವಲ ಅದೊಂದೇ ರೂಪದಲ್ಲಿ ಅಭಿವ್ಯಕ್ತಗೊಳ್ಳಲಿಲ್ಲ. 1970ರ ದಶಕದಲ್ಲಿ ಮಹಿಳೆಯರು, ವಿದ್ಯಾರ್ಥಿಗಳು, ದಲಿತರು ಮತ್ತು ರೈತರು ಹೀಗೆ ವಿವಿಧ ಸಾಮಾಜಿಕ ಗುಂಪುಗಳಿಗೆ ಪ್ರಜಾಸತ್ತೆಯ ರಾಜಕೀಯವು ತಮ್ಮ ಅಗತ್ಯಗಳು ಮತ್ತು ಬೇಡಿಕೆಗಳನ್ನು ಈಡೇರಿಸುತ್ತಿಲ್ಲವೆಂದು ಅನಿಸತೊಡಗಿತು. ಹೀಗಾಗಿ ಅವರೆಲ್ಲ ತಮ್ಮ ಬೇಡಿಕೆಗಳಿಗೆ ದನಿ ನೀಡಲು ವಿವಿಧ ಸಾಮಾಜಿಕ ಸಂಘಟನೆಗಳ ಅಡಿಯಲ್ಲಿ ಒಟ್ಟುಗೂಡಿದರು. ಆ ರೀತಿಯ ಹಕ್ಕು ಪ್ರತಿಪಾದನೆಗಳು (ಹಕ್ಕೊತ್ತಾಯಗಳು) ಭಾರತದ ರಾಜಕೀಯದಲ್ಲಿ ಜನಾಂದೋಲನಗಳಿಗೆ ಅಥವಾ ಹೊಸ ಬಗೆಯ ಸಾಮಾಜಿಕ ಚಳುವಳಿಗೆ ನಾಂದಿ ಹಾಡಿದವು.

1970ರ ನಂತರ ಹುಟ್ಟಿಕೊಂಡ ಅಂತಹ ಕೆಲವು ಜನಾಂದೋಲನಗಳ (ಸಾಮಾಜಿಕ ಚಳುವಳಿಗಳು) ಪಯಣದ ಜಾಡನ್ನು ನಾವು ಈ ಅಧ್ಯಾಯದಲ್ಲಿ ಅಭ್ಯಸಿಸೋಣ. ಈ ಅಧ್ಯಾಯದಲ್ಲಿ ನಾವು ತಿಳಿದುಕೊಳ್ಳುವ ಕೆಲವು ಅಂಶಗಳು ಹೀಗಿವೆ:

- ಜನಾಂದೋಲನಗಳೆಂದರೆ ಏನು?
- ಅವು ಭಾರತೀಯ ಸಮಾಜದ ಯಾವ ವರ್ಗಗಳನ್ನು ಸಂಘಟಿಸಿದವು?
- ಈ ಆಂದೋಲನಗಳ ಪ್ರಮುಖ ಕಾರ್ಯಸೂಚಿಯೇನು?
- ನಮ್ಮ ರೀತಿಯ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಅವು ವಹಿಸುವ ಪಾತ್ರವೇನು?




ದೇಶದ ಮೊಟ್ಟಮೊದಲ ಪರಿಸರ ಚಳುವಳಿಗಳಲ್ಲಿ ಒಂದೆನಿಸಿದ ಚಿಪ್ಕೋ ಚಳುವಳಿಯಲ್ಲಿ ಭಾಗವಹಿಸಿದವರ ಛಾಯಾಚಿತ್ರ

## ಜನಾಂದೋಲನಗಳ (ಸಾಮಾಜಿಕ ಚಳುವಳಿಗಳು) ಉಗಮ

### ಜನಾಂದೋಲನಗಳ ಸ್ವರೂಪ

ಈ ಅಧ್ಯಾಯದ ಪ್ರಾರಂಭದ ಚಿತ್ರವನ್ನು ಒಮ್ಮೆ ಅವಲೋಕಿಸಿ. ನಿಮಗೆ ಏನು ಕಾಣುತ್ತಿದೆ? ಹಳ್ಳಿಯ ಜನ ಅಕ್ಷರಶಃ ಮರಗಳನ್ನು ಅಪ್ಪಿಕೊಂಡಿದ್ದಾರೆ. ಅವರೇನಾದರೂ ಆಟ ಆಡುತ್ತಿದ್ದಾರೆಯೆ? ಅಥವಾ ಯಾವುದಾದರೂ ಆಚರಣೆಯನ್ನು ಅಥವಾ ಹಬ್ಬವನ್ನು ಆಚರಿಸುತ್ತಿದ್ದಾರೆಯೆ? ಖಂಡಿತವಾಗಿಯೂ ಇಲ್ಲ. 1973ರ ಆದಿಭಾಗದಲ್ಲಿ ಉತ್ತರಾಖಂಡವೆಂದು ಈಗ ಕರೆಯಲ್ಪಡುವ ರಾಜ್ಯದ ಒಂದು ಹಳ್ಳಿಯ ಪುರುಷರು ಮತ್ತು ಮಹಿಳೆಯರ ವಿಶಿಷ್ಟ ಬಗೆಯ ಸಾಮೂಹಿಕ ಕ್ರಿಯೆಯನ್ನು ಈ ಚಿತ್ರವು ತೋರಿಸುತ್ತಿದೆ. ಸರಕಾರದ ಅನುಮತಿ ಪಡೆದು ಆರ್ಥಿಕ ವಹಿವಾಟಿಗಾಗಿ ಮರ ಕಡಿಯುವುದರ ವಿರುದ್ಧ ಈ ಹಳ್ಳಿಗರು ಪ್ರತಿಭಟನೆ ನಡೆಸುತ್ತಿದ್ದಾರೆ. ಮರ ಕಡಿಯದಂತೆ ತಡೆಯಲು ಮರಗಳನ್ನು ಅಪ್ಪಿಕೊಳ್ಳುವ ಮೂಲಕ ಅವರು ತಮ್ಮ ಪ್ರತಿಭಟನೆಗೆ ನವೀನ ತಂತ್ರವನ್ನು ಬಳಸಿದರು. ಈ ಪ್ರತಿಭಟನೆಗಳೇ ಮುಂದೆ ಚಿಪ್ಕೋ ಚಳುವಳಿ ಎಂದು ಕರೆಯಲಾದ ಒಂದು ಜಗತ್ಪ್ರಸಿದ್ಧ ಪರಿಸರ ಚಳುವಳಿಯ ಉಪಕ್ರಮಗಳೆನಿಸಿದವು.





ಉತ್ತರಾಖಂಡದ ಚಮೋಲಿಯಲ್ಲಿನ ಚಿಪ್ಕೊ ಚಳುವಳಿಯ ಆರಂಭಿಕ ಹಂತದ ಎರಡು ಐತಿಹಾಸಿಕ ಚಿತ್ರಗಳು

**ಚಿಪ್ಕೊ ಚಳುವಳಿ**

ಉತ್ತರಾಖಂಡದ ಕೃಷಿಕರು ತಮ್ಮ ಕೃಷಿ ಸಲಕರಣೆಗಳನ್ನು ತಯಾರಿಸುವ ಸಲುವಾಗಿ ಬೂದಿ ಮರಗಳನ್ನು ಕಡಿಯಲು ಅರಣ್ಯಾಧಿಕಾರಿಗಳು ಅನುಮತಿಯನ್ನು ನಿರಾಕರಿಸಿದಾಗ, ಈ ಚಳುವಳಿಯು ಉತ್ತರಾಖಂಡದ ಎರಡು-ಮೂರು ಹಳ್ಳಿಗಳಲ್ಲಿ ಆರಂಭವಾಯಿತು. ಅರಣ್ಯ ಇಲಾಖೆಯು ಅದೇ ಅರಣ್ಯ ಭೂಮಿಯನ್ನು ವಾಣಿಜ್ಯೋದ್ದೇಶಗಳಿಗಾಗಿ ಆಟದ ಸಾಮಾನು ತಯಾರಿಸುವ ಕಂಪೆನಿಯೊಂದಕ್ಕೆ ಮಂಜೂರು ಮಾಡಿತು. ಇದು ಹಳ್ಳಿಯ ಜನರನ್ನು ಸಿಟ್ಟಿಗೆಬ್ಬಿಸಿ, ಅವರು ಸರಕಾರದ ಈ ನಡೆಯನ್ನು ಪ್ರತಿಭಟಿಸಿದರು. ಹೋರಾಟವು ಉತ್ತರಾಖಂಡದ ಅನೇಕ ಭಾಗಗಳಲ್ಲಿ ತ್ವರಿತವಾಗಿ ವ್ಯಾಪಿಸಿತು. ಆ ಪ್ರದೇಶದ ಪರಿಸರಕ್ಕೆ ಸಂಬಂಧಿಸಿದ ಮತ್ತು ಆರ್ಥಿಕ ಶೋಷಣೆಯಂತಹ ದೊಡ್ಡ ವಿಷಯಗಳನ್ನು ಈ ಚಳುವಳಿಯಲ್ಲಿ ಚರ್ಚಿಸಲಾಯಿತು. ಹೊರಗಿನವರಿಗೆ ಅರಣ್ಯ ನಾಶಕ್ಕೆ ಕಾರಣವಾಗುವ ಗುತ್ತಿಗೆಗಳನ್ನು ನೀಡಬಾರದು ಹಾಗೂ ಭೂಮಿ, ನೀರು ಮತ್ತು ಕಾಡುಗಳಂತಹ ನೈಸರ್ಗಿಕ ಸಂಪನ್ಮೂಲಗಳ ಮೇಲೆ ಸ್ಥಳೀಯ ಸಮುದಾಯಗಳು ಪರಿಣಾಮಕಾರಿ ನಿಯಂತ್ರಣವನ್ನು ಹೊಂದಿರಬೇಕೆಂದು ಹಳ್ಳಿಯ ಜನರು ಆಗ್ರಹಿಸಿದರು. ಸರಕಾರವು ಸಣ್ಣ ಉದ್ದಿಮೆಗಳಿಗೆ ಕಡಿಮೆ ವೆಚ್ಚದ ಸಾಮಗ್ರಿಗಳನ್ನು ಒದಗಿಸಬೇಕು ಮತ್ತು ಪರಿಸರ ಸಮತೋಲನಕ್ಕೆ ಧಕ್ಕೆಯಾಗದಂತೆ ಪ್ರದೇಶದ ಅಭಿವೃದ್ಧಿಯನ್ನು ಖಾತರಿಪಡಿಸಿಕೊಳ್ಳಬೇಕೆಂಬುದು ಅವರ ಇಚ್ಛೆಯಾಗಿತ್ತು. ಭೂಹೀನ ಅರಣ್ಯ ಕಾರ್ಮಿಕರ ಆರ್ಥಿಕ ಸಮಸ್ಯೆಗಳನ್ನು ಈ ಚಳುವಳಿಯು ಚರ್ಚೆಗೊಳಪಡಿಸಿ, ಕನಿಷ್ಠ ವೇತನದ ಖಾತರಿಗೆ ಒತ್ತಾಯಿಸಿತು.




ಅದ್ಭುತ! ಆದರೆ ಇದು ರಾಜಕೀಯ ಚರಿತ್ರೆಗೆ ಹೇಗೆ ಸಂಬಂಧಪಟ್ಟಿರಬಹುದು?

ಚಿಪ್ಕೊ ಆಂದೋಲನದಲ್ಲಿ ಮಹಿಳೆಯರು ಸಕ್ರಿಯವಾಗಿ ಪಾಲ್ಗೊಂಡಿದ್ದು ಅತ್ಯಂತ ಹೊಸ ಅಂಶವೆನಿಸಿತ್ತು. ಆ ಪ್ರದೇಶದ ಅರಣ್ಯ ಗುತ್ತಿಗೆದಾರರು ಪುರುಷರಿಗೆ ಎರಡು ಪಟ್ಟು ಹೆಚ್ಚು ಹೆಂಡವನ್ನು ಸರಬರಾಜುಮಾಡತೊಡಗಿದ್ದರು. ಮಹಿಳೆಯರು ಕುಡಿತದ ಅಭ್ಯಾಸದ ವಿರುದ್ಧ ನಿರಂತರ ಪ್ರತಿಭಟನೆಯನ್ನು ಆರಂಭಿಸಿದರು, ಮತ್ತು ತಮ್ಮ ಆಂದೋಲನದ ಕಾರ್ಯಸೂಚಿಗಳಲ್ಲಿ ಇತರ ಸಾಮಾಜಿಕ ಸಮಸ್ಯೆಗಳನ್ನೂ ಒಳಗೊಳ್ಳುತ್ತ ಆಂದೋಲನದ ವ್ಯಾಪ್ತಿಯನ್ನು ವಿಸ್ತರಿಸಿದರು. ಹಿಮಾಲಯದ ಪ್ರಾಂತಗಳು ಪೂರ್ತಿಯಾಗಿ ಹಸಿರಾಗುವವರೆಗೆ ಅಲ್ಲಿ ಮರಗಳನ್ನು ಕಡಿಯುವುದರ ಮೇಲೆ ಸರಕಾರವು ಹದಿನೈದು ವರ್ಷಗಳವರೆಗೆ ನಿಷೇಧವನ್ನು ಹೇರಿದಾಗ, ಈ ಆಂದೋಲನಕ್ಕೆ ಯಶಸ್ಸು ದೊರೆಯಿತು. ಆದರೆ ಅದಕ್ಕಿಂತ ಹೆಚ್ಚಾಗಿ, ಏಕೈಕ ಸಮಸ್ಯೆಯ ಕುರಿತು ಶುರುವಾದ ಚಿಪ್ಕೋ ಚಳುವಳಿಯು 1970ರ ದಶಕದಲ್ಲಿ ಹಾಗೂ ನಂತರದಲ್ಲಿ ದೇಶದ ವಿವಿಧ ಭಾಗಗಳಲ್ಲಿ ಹೊರಹೊಮ್ಮಿದ ಅಂತಹ ಅನೇಕ ಜನಾಂದೋಲನಗಳಿಗೆ ಒಂದು ಸಂಕೇತವಾಯಿತು. ಈ ಅಧ್ಯಾಯದಲ್ಲಿ ಅಂತಹ ಕೆಲವು ಚಳುವಳಿಗಳನ್ನು ಕುರಿತು ಅಭ್ಯಸಿಸೋಣ.

### ಪಕ್ಷಗಳನ್ನಾಧರಿಸಿದ ಚಳುವಳಿಗಳು

ಜನಾಂದೋಲನಗಳು ಸಾಮಾಜಿಕ ಚಳುವಳಿಗಳು ಅಥವಾ ರಾಜಕೀಯ ಚಳುವಳಿಗಳ ರೂಪವನ್ನು ತೆಗೆದುಕೊಳ್ಳಬಹುದು, ಬಹಳ ಸಲ ಅವೆರಡೂ ಪರಸ್ಪರ ಅತಿವ್ಯಾಪಿಸಿರುತ್ತವೆ(overlap). ಉದಾಹರಣೆಗೆ ರಾಷ್ಟ್ರೀಯವಾದಿ ಚಳುವಳಿಯು ಮುಖ್ಯವಾಗಿ ಒಂದು ರಾಜಕೀಯ ಚಳುವಳಿಯಾಗಿತ್ತು. ಆದರೆ ನಾವು ನೋಡಿದ ಹಾಗೆ ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳ ಮೇಲೆ ವಸಾಹತು ಕಾಲದಲ್ಲಿ ನಡೆದ ಚರ್ಚೆಗಳು, ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಜಾತಿ-ವಿರೋಧಿ ಚಳವಳಿ, ಕಿಸಾನ್ ಸಭೆಗಳು ಮತ್ತು ಕಾರ್ಮಿಕ ಸಂಘ ಚಳುವಳಿಗಳಂತಹ ಸ್ವತಂತ್ರ ಸಾಮಾಜಿಕ ಚಳುವಳಿಗಳ ಉದಯಕ್ಕೆ ಕಾರಣವಾದವು. ಈ ಚಳುವಳಿಗಳು ಕೆಲವು ಸಾಮಾಜಿಕ ಸಂಘರ್ಷಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಎತ್ತಿ ತೋರಿಸಿದವು.

ಇವುಗಳಲ್ಲಿ ಕೆಲವು ಚಳುವಳಿಗಳು ಸ್ವಾತಂತ್ರ್ಯಾನಂತರವೂ ಮುಂದುವರೆದವು. ಕಾರ್ಮಿಕ ಒಕ್ಕೂಟದ ಚಳುವಳಿಯು ಮುಂಬೈ, ಕಲ್ಕತ್ತಾ ಮತ್ತು ಕಾನ್ಪುರದಂತಹ ಪ್ರಮುಖ ನಗರಗಳಲ್ಲಿನ ಔದ್ಯಮಿಕ ಕಾರ್ಮಿಕರ ನಡುವೆ ಸಶಕ್ತವಾಗಿತ್ತು. ಎಲ್ಲಾ ಪ್ರಮುಖ ರಾಜಕೀಯ ಪಕ್ಷಗಳೂ ಈ ಕಾರ್ಮಿಕರನ್ನು ಸಂಘಟಿಸಲು ತಮ್ಮದೇ ಪ್ರತ್ಯೇಕ ಕಾರ್ಮಿಕ ಒಕ್ಕೂಟಗಳನ್ನು ಸ್ಥಾಪಿಸಿದವು. ಸ್ವಾತಂತ್ರ್ಯ ದೊರೆತ

ಆರಂಭದ ವರ್ಷಗಳಲ್ಲಿ ಆಂಧ್ರಪ್ರದೇಶದ ತೆಲಂಗಾಣ ಪ್ರದೇಶದ ರೈತರು ಕಮ್ಯೂನಿಸ್ಟ್ ಪಕ್ಷಗಳ ನೇತೃತ್ವದಲ್ಲಿ ದೊಡ್ಡ ಪ್ರಮಾಣದ ಪ್ರತಿಭಟನೆಗಳನ್ನು ಸಂಘಟಿಸಿ ಉಳುವವರಿಗೆ ಭೂಮಿಯ ಮರುಹಂಚಿಕೆಗಾಗಿ ಒತ್ತಾಯಿಸಿದರು. ಆಂಧ್ರಪ್ರದೇಶ, ಪಶ್ಚಿಮ ಬಂಗಾಲ, ಬಿಹಾರದ ಭಾಗಗಳಲ್ಲಿನ ಮತ್ತು ಅದರ ಪಕ್ಕದಲ್ಲಿನ ಪ್ರದೇಶಗಳ ರೈತರು ಮತ್ತು ಕೃಷಿ ಕಾರ್ಮಿಕರು ಮಾರ್ಕ್ಸ್‌ವಾದಿ ಮತ್ತು ಲೆನಿನ್‌ವಾದಿ ಕಾರ್ಮಿಕರ ನೇತೃತ್ವದಲ್ಲಿ ತಮ್ಮ ಪ್ರತಿಭಟನೆಗಳನ್ನು ಮುಂದುವರೆಸಿದರು; ಅವರನ್ನು ನಕ್ಸಲೈಟ್ಸ್ ಎಂದು ಗುರುತಿಸಲಾಗಿದೆ. ರೈತರು ಮತ್ತು ಕಾರ್ಮಿಕರ ಚಳುವಳಿಗಳು ಆರ್ಥಿಕ ದೃಷ್ಟಿಯಿಂದ ಆಗುವ ಅನ್ಯಾಯ ಮತ್ತು ಅಸಮಾನತೆಯ ಮೇಲೆ ಮುಖ್ಯವಾಗಿ ಗಮನವನ್ನು ಕೇಂದ್ರೀಕರಿಸಿದ್ದವು.

ಈ ಚಳುವಳಿಗಳು ಚುನಾವಣೆಗಳಲ್ಲಿ ನೇರವಾಗಿ ಪಾಲ್ಗೊಳ್ಳಲಿಲ್ಲ. ಆದರೆ ರಾಜಕೀಯ ಪಕ್ಷಗಳೊಂದಿಗೆ ನಿಕಟ ಸಂಬಂಧವನ್ನು ಉಳಿಸಿಕೊಂಡಿದ್ದವು. ಈ ಚಳುವಳಿಗಳಲ್ಲಿ ಪಾಲ್ಗೊಂಡ ಅನೇಕರು ಪ್ರತ್ಯೇಕವಾಗಿ ಮತ್ತು ಸಂಸ್ಥೆಗಳಾಗಿ ಪಕ್ಷಗಳೊಂದಿಗೆ ಸಕ್ರಿಯ ಸಂಬಂಧ ಹೊಂದಿದ್ದರು. ಈ ನಂಟುಗಳ ಪರಿಣಾಮವಾಗಿ ಪಕ್ಷ ರಾಜಕಾರಣದಲ್ಲಿ ವಿವಿಧ ಸಾಮಾಜಿಕ ವರ್ಗಗಳಿಂದ ಬರುವ ಬೇಡಿಕೆಗಳಿಗೆ ಉತ್ತಮವಾದ ಪ್ರಾತಿನಿಧ್ಯ ಸಿಗುವಂತಾಯಿತು.




ಪಕ್ಷೇತರ (ಯಾವ ಪಕ್ಷಕ್ಕೂ ಸೇರಿರದ) ರಾಜಕೀಯ ಸಂಘಟನೆ ನನಗೆ ಅರ್ಥವಾಗಲಿಲ್ಲ. ಪಕ್ಷವಿಲ್ಲದೆ ರಾಜಕಾರಣ ಹೇಗೆ ಸಾಧ್ಯ?

**ಪಕ್ಷೇತರ (ಯಾವ ಪಕ್ಷಕ್ಕೂ ಸೇರಿರದ) ಚಳುವಳಿಗಳು**

1970 ಮತ್ತು 1980ರ ದಶಕದಲ್ಲಿ ಸಮಾಜದ ಹೆಚ್ಚಿನ ವರ್ಗಗಳಲ್ಲಿ ರಾಜಕೀಯ ಪಕ್ಷಗಳ ಕಾರ್ಯ ನಿರ್ವಹಣೆಯ ಬಗೆಗೆ ಭ್ರಮನಿರಸನವುಂಟಾಗಿತ್ತು. ಜನತಾ ಪಕ್ಷದ ಪ್ರಯೋಗದ ವೈಫಲ್ಯ ಮತ್ತು ಅದರ ಪರಿಣಾಮವಾಗಿ ಉಂಟಾದ ರಾಜಕೀಯ ಅಸ್ಥಿರತೆಯು ಅದರ ನೇರ ಕಾರಣಗಳೆನಿಸಿದವು. ಆದರೆ ದೀರ್ಘಾವಧಿಯ ನಿಟ್ಟಿನಲ್ಲಿ ಆ ಭ್ರಮನಿರಸನವು ಸರಕಾರದ ಆರ್ಥಿಕ ನೀತಿಗಳ ಪರಿಣಾಮವೂ ಹೌದು. ಸ್ವಾತಂತ್ರ್ಯದ ನಂತರ ನಾವು ಅಳವಡಿಸಿಕೊಂಡ ಯೋಜಿತ ಅಭಿವೃದ್ಧಿಯ (planned development) ಮಾದರಿಯು ಅಭಿವೃದ್ಧಿ ಮತ್ತು ವಿತರಣೆ ಎಂಬ ಅವಳಿ ಗುರಿಗಳನ್ನು ಆಧರಿಸಿತ್ತು. ಸ್ವಾತಂತ್ರ್ಯದ ನಂತರ ಮೊದಲ ಇಪ್ಪತ್ತು ವರ್ಷಗಳಲ್ಲಿ ವಿವಿಧ ಆರ್ಥಿಕ ವಿಭಾಗಗಳಲ್ಲಿನ ಗಮನಾರ್ಹ ಆರ್ಥಿಕ ಪ್ರಗತಿಯ ಹೊರತಾಗಿಯೂ ದೊಡ್ಡ ಪ್ರಮಾಣದಲ್ಲಿ ಬಡತನ ಮತ್ತು ಅಸಮಾನತೆಗಳು ಉಳಿದುಕೊಂಡವು. ಆರ್ಥಿಕ ಪ್ರಗತಿಯ ಲಾಭಗಳು ಸಮಾಜದ ಎಲ್ಲಾ ಭಾಗಗಳಿಗೂ ಸಮಾನವಾಗಿ ಹಂಚಿಕೆಯಾಗಲಿಲ್ಲ. ಜಾತಿ ಮತ್ತು ಲಿಂಗಭೇದದಂತಹ ತಾರತಮ್ಯಗಳು ಬಡತನದ ಸಮಸ್ಯೆಯನ್ನು ಹಲವು ವಿಧದಲ್ಲಿ ಇನ್ನಷ್ಟು ತೀವ್ರ ಮತ್ತು ಸಂಕೀರ್ಣಗೊಳಿಸಿದವು. ನಗರದ ಔದ್ಯೋಗಿಕ ಕ್ಷೇತ್ರ ಮತ್ತು ಗ್ರಾಮೀಣ ಕೃಷಿ ಕ್ಷೇತ್ರದ ನಡುವೆ ಅಂತರವಿತ್ತು. ಸಮಾಜದ ವಿವಿಧ ಗುಂಪುಗಳಲ್ಲಿ ತಮಗೆ ಅನ್ಯಾಯವಾಗುತ್ತಿದೆ, ತಾವು ವಂಚಿತರು ಎಂಬ ಭಾವ ಮೂಡಿತು.

ರಾಜಕೀಯವಾಗಿ ಸಕ್ರಿಯವಾಗಿದ್ದ ಅನೇಕ ಗುಂಪುಗಳು ಅಸ್ತಿತ್ವದಲ್ಲಿದ್ದ ಪ್ರಜಾತಾಂತ್ರಿಕ ಸಂಸ್ಥೆಗಳು ಮತ್ತು ಚುನಾವಣಾ ರಾಜಕೀಯದಲ್ಲಿ ವಿಶ್ವಾಸ ಕಳೆದುಕೊಂಡವು. ಆದ್ದರಿಂದ ಪಕ್ಷ ರಾಜಕಾರಣದಿಂದ ಹೊರಗೆ ಉಳಿಯಲು ಅವು ನಿರ್ಧರಿಸಿದವು ಮತ್ತು ತಮ್ಮ ವಿರೋಧವನ್ನು ದಾಖಲಿಸುವುದಕ್ಕಾಗಿ ಜನರನ್ನು ಸಂಘಟಿಸತೊಡಗಿದವು. ದಲಿತರು ಮತ್ತು ಆದಿವಾಸಿಗಳಂತಹ ಅಂಚಿಗೆ ತಳ್ಳಲ್ಪಟ್ಟ ಸಮುದಾಯಗಳನ್ನು ಸಂಘಟಿಸುವ ಕಾರ್ಯದಲ್ಲಿ ಸಮಾಜದ ವಿವಿಧ ಭಾಗಗಳ ವಿದ್ಯಾರ್ಥಿಗಳು ಮತ್ತು ಯುವ-ರಾಜಕೀಯ ಕಾರ್ಯಕರ್ತರು ಮುಂಚೂಣಿಯಲ್ಲಿದ್ದರು. ಮಧ್ಯಮವರ್ಗದ ಯುವ ಕಾರ್ಯಕರ್ತರು ಗ್ರಾಮೀಣ ಬಡ ಜನತೆಯ ಸಲುವಾಗಿ ಸೇವಾ ಸಂಸ್ಥೆಗಳು ಮತ್ತು ರಚನಾತ್ಮಕ ಯೋಜನೆಗಳನ್ನು ಆರಂಭಿಸಿದರು. ಈ ರೀತಿಯ ಸಾಮಾಜಿಕ ಕೆಲಸವು ಸ್ವಯಂಸ್ಫೂರ್ತಿಯಿಂದ ತೊಡಗಿಕೊಳ್ಳುವಂತಹ ಸಂಘಟನೆಗಳಾದ್ದರಿಂದ ಇವುಗಳಲ್ಲಿನ ಅನೇಕ ಸಂಘಟನೆಗಳನ್ನು ಸ್ವಯಂಸೇವಾ ಸಂಸ್ಥೆಗಳು ಅಥವಾ ಸ್ವಯಂಪ್ರೇರಿತ ಕ್ಷೇತ್ರದ ಸಂಸ್ಥೆಗಳು ಎಂದು ಕರೆಯಲಾಯಿತು.

ಈ ಸ್ವಯಂಸೇವಾ ಸಂಘಟನೆಗಳು (ಸಂಸ್ಥೆಗಳು) ಪಕ್ಷ ರಾಜಕಾರಣದಿಂದ ದೂರ ಉಳಿಯಲು ನಿರ್ಧರಿಸಿದವು. ಅವು ಸ್ಥಳೀಯ ಅಥವಾ ಪ್ರಾದೇಶಿಕ ಮಟ್ಟದಲ್ಲಿ ಚುನಾವಣೆಯ ಕಣಕ್ಕೆ ಇಳಿಯಲಿಲ್ಲ ಮತ್ತು ಯಾವುದೇ ಒಂದು ಪಕ್ಷವನ್ನು ಬೆಂಬಲಿಸಲಿಲ್ಲ. ಇವುಗಳಲ್ಲಿ ಹೆಚ್ಚಿನ ಗುಂಪುಗಳಿಗೆ ರಾಜಕೀಯದಲ್ಲಿ ನಂಬಿಕೆಯಿದ್ದು, ಅದರಲ್ಲಿ ಪಾಲ್ಗೊಳ್ಳಲು ಬಯಸಿದ್ದವಾದರೂ, ಅದು ರಾಜಕೀಯ ಪಕ್ಷಗಳ ಮುಖಾಂತರವಲ್ಲ. ಆದ್ದರಿಂದ ಈ ಸಂಘಟನೆಗಳನ್ನು 'ಪಕ್ಷರಹಿತ (ಪಕ್ಷೇತರ) ರಾಜಕೀಯ ಸಂಘಟನೆಗಳು' ಎಂದು ಕರೆಯಲಾಯಿತು. ಸ್ಥಳೀಯ ಸಮಸ್ಯೆಗಳನ್ನು ರಾಜಕೀಯ ಪಕ್ಷಗಳಿಗಿಂತಲೂ ಪೌರರ ಸ್ಥಳೀಯ ಗುಂಪುಗಳ ನೇರ ಹಾಗೂ ಸಕ್ರಿಯ ಪಾಲ್ಗೊಳ್ಳುವಿಕೆಯ ಮೂಲಕ ಹೆಚ್ಚು ಪರಿಣಾಮಕಾರಿಯಾಗಿ ಪರಿಹರಿಸಬಹುದು ಎಂದು ಅವು ಆಶಿಸಿದ್ದವು. ಪ್ರಜಾಸತ್ತಾತ್ಮಕ ಸರಕಾರದ ಸ್ವರೂಪವನ್ನು ಜನರು ನೇರವಾಗಿ ಪಾಲ್ಗೊಳ್ಳುವ ಮೂಲಕ ಸುಧಾರಿಸಬಹುದೆಂದು ಸಹ ಆಶಿಸಲಾಗಿತ್ತು. ಅಂತಹ ಸ್ವಯಂಸೇವಾ ಸಂಘಟನೆಗಳು ಈಗಲೂ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಕಾರ್ಯನಿರತವಾಗಿವೆ. ಆದರೆ ಅವುಗಳ ಸ್ವರೂಪ ಬದಲಾಗಿದೆ. ಇತ್ತೀಚೆಗೆ ಈ ರೀತಿಯ ಅನೇಕ ಸಂಘಟನೆಗಳು ಅಂತರರಾಷ್ಟ್ರೀಯ ಸೇವಾ ಸಂಸ್ಥೆಗಳನ್ನು ಒಳಗೊಂಡಂತೆ ಬಾಹ್ಯ ಸಂಸ್ಥೆಗಳ ಮೂಲಕ ಆರ್ಥಿಕ ನೆರವನ್ನು ಪಡೆಯುತ್ತಿವೆ. ಈ ಸಂಘಟನೆಗಳಿಗೆ ದೊಡ್ಡ ಪ್ರಮಾಣದಲ್ಲಿ ದೊರೆಯುತ್ತಿರುವ ಬಾಹ್ಯ ಧನಸಹಾಯದ ಪರಿಣಾಮವಾಗಿ ಸ್ಥಳೀಯವಾಗಿ ಉಪಕ್ರಮಗಳನ್ನು ಕೈಗೊಳ್ಳುವ ಅವುಗಳ ಆದರ್ಶವು ದುರ್ಬಲಗೊಂಡಿದೆ.










ಜನಾಂದೋಲನಗಳು ಈ ರೀತಿಯ ಭಿತ್ತಿಚಿತ್ರಗಳ ಮೂಲಕ ಕಲಾತ್ಮಕ ಸೃಷ್ಟಿಗೆ ಪ್ರೇರಣೆಯನ್ನು ಒದಗಿಸಿವೆ. ಈ ಮೂರು ಭಿತ್ತಿಚಿತ್ರಗಳು ಕ್ರಮವಾಗಿ ಕೋಕಕೋಲಾ ಕಂಪೆನಿಯ ವಿರುದ್ಧದ ಆಂದೋಲನ, ಹೆದ್ದಾರಿಯೊಂದರ ವಿರುದ್ಧದ ಚಳುವಳಿ ಮತ್ತು ಪೆರಿಯಾರ್ ನದಿ ಉಳಿಸಿ ಅಭಿಯಾನವನ್ನು ಕುರಿತದ್ದಾಗಿವೆ.

COCA COLONISATION – ಕೋಕ- ವಸಾಹತೀಕರಣ

DESTROY THEM BEFORE THEY DESTROY US! - ಅವು ನಮ್ಮನ್ನು ನಾಶ ಮಾಡುವ ಮೊದಲು ಅವುಗಳನ್ನು ನಾಶ ಮಾಡಿ!

MONEY LOSS – ಧನ ಹಾನಿ
CANCER – ಕ್ಯಾನ್ಸರ್‌ಕಾರಕ
MEMORY LOSS – ನೆನಪು ನಾಶ
DO NOT PROCEED - ಮುಂದೆ ಹೋಗಬೇಡಿ



ನಾಮದೇವ ಡಸಾಳ್ ಅವರ ಕವಿತೆ

ಸೂರ್ಯನಿಗೆ ಬೆನ್ನು ತಿರುಗಿಸಿ, ಅವರು ಶತಮಾನಗಳ ಕಾಲ ಪಯಣಿಸಿದರು.
ಈಗ, ನಾವು ಕತ್ತಲ ಯಾತ್ರಿಗಳಾಗುವುದನ್ನು ತಿರಸ್ಕರಿಸತಕ್ಕದ್ದು.
ಅವನು, ನಮ್ಮ ತಂದೆ, ಕತ್ತಲನ್ನು ಹೊತ್ತೂ, ಹೊತ್ತೂ
ಬಾಗಿದ್ದಾನೆ ಈಗ;
ಆ ಹೊರೆಯನ್ನು ಅವನ ಬೆನ್ನಿಂದ ಇಳಿಸಬೇಕು ನಾವೀಗ.
ಈ ಭವ್ಯ ನಗರಕ್ಕಾಗಿ ನಮ್ಮ ರಕ್ತ ಹರಿಯಿತು, ಆದರೆ
ನಮಗೆ ಸಿಕ್ಕಿದ್ದು ಕಲ್ಲು ತಿನ್ನುವ ಹಕ್ಕು
ಈಗ, ನಾವೀಗ ಸ್ಫೋಟಿಸಬೇಕು ಗಗನ ಚುಂಬಿ ಕಟ್ಟಡವನ್ನು!

ಸಹಸ್ರ ವರ್ಷಗಳ ನಂತರ ಸೂರ್ಯಕಾಂತಿ ಹೂವನ್ನೀವ ಫಕೀರ ನಮ್ಮನ್ನು ಹರಸಿದ್ದಾನೆ,
ಈಗ, ನಾವೀಗ, ಸೂರ್ಯಕಾಂತಿಯಂತೆ ಸೂರ್ಯನತ್ತ ಮುಖ ಮಾಡಬೇಕು.

ನಾಮದೇವ ಡಸಾಳ್ ಅವರ ಗೊಲ್ಪಿಟಾ ಸಂಕಲನದ ಮರಾಠಿ ಕವಿತೆಯ ಇಂಗ್ಲಿಷ್ ಅನುವಾದ: ಜಯಂತ ಕರ್ವೆ ಮತ್ತು ಎಲಿಯನೇರ್ ಝೆಲಿಯಟ್

## ದಲಿತ್ ಪ್ಯಾಂಥರ್ಸ್

ಸುಪ್ರಸಿದ್ಧ ಮರಾಠಿ ಕವಿ ನಾಮದೇವ ಡಸಾಳ್‌ರವರ ಈ ಕವಿತೆಯನ್ನು ಓದಿ. ಈ ಕವಿತೆಯಲ್ಲಿನ 'ಕತ್ತಲ ಯಾತ್ರಿಗಳು' ಯಾರು ಮತ್ತು 'ಸೂರ್ಯಕಾಂತಿಯ ಹೂವನ್ನಿತ್ತು ಅವರನ್ನು ಹರಸಿದ ಫಕೀರ' ಯಾರು ಎಂಬುದು ನಿಮಗೆ ಗೊತ್ತೆ? ನಮ್ಮ ಸಮಾಜದಲ್ಲಿ ದೀರ್ಘ ಕಾಲದಿಂದ ಜಾತಿ ಆಧಾರಿತ ಕ್ರೂರ ಅನ್ಯಾಯಗಳನ್ನು ಅನುಭವಿಸಿದ ದಲಿತ ಸಮುದಾಯಗಳೇ ಯಾತ್ರಿಗಳು. ಕವಿಯು ಡಾ. ಅಂಬೇಡ್ಕರ್‌ರವರನ್ನು ತಮ್ಮ ವಿಮೋಚಕರೆಂದು ಸ್ಮರಿಸುತ್ತಿದ್ದಾರೆ. ಎಪ್ಪತ್ತರ ದಶಕದಲ್ಲಿ ಮಹಾರಾಷ್ಟ್ರದ ದಲಿತ ಕವಿಗಳು ಈ ರೀತಿಯ ಅನೇಕ ಕವಿತೆಗಳನ್ನು ಬರೆದರು. ಈ ಕವಿತೆಗಳು, ಸ್ವಾತಂತ್ರ್ಯ ದೊರೆತು ಇಪ್ಪತ್ತು ವರ್ಷಗಳ ನಂತರವೂ ದಲಿತ ಸಮುದಾಯದ ಜನರಲ್ಲಿ ಮುಂದುವರಿಯುತ್ತಲೇ ಇರುವ ಮಾನಸಿಕ ಯಾತನೆಯ ಅಭಿವ್ಯಕ್ತಿಗಳೆನಿಸಿವೆ. ಆದರೆ ಅವು ದಲಿತ ಸಮುದಾಯಗಳು ರೂಪಿಸಿಕೊಳ್ಳ ಬಯಸಿದ ಒಂದು ಆಶಾದಾಯಕ ಭವಿಷ್ಯದೆಡೆಗಿನ ಭರವಸೆಯನ್ನೂ ವ್ಯಕ್ತಪಡಿಸುತ್ತವೆ. ಡಾ. ಅಂಬೇಡ್ಕರ್‌ರವರು ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಯ ಬಗ್ಗೆ ಹೊಂದಿದ್ದ ಮುನ್ನೋಟ ಮತ್ತು ಜಾತಿಯನ್ನಾಧರಿಸಿದ ಹಿಂದೂ ಸಾಮಾಜಿಕ ವ್ಯವಸ್ಥೆಯ ಹೊರಗೆ ದಲಿತರಿಗೆ ಘನತೆಯ ಭವಿಷ್ಯವನ್ನು ಕಲ್ಪಿಸುವ ಸಲುವಾಗಿ ಅವರು ಮಾಡಿದ ನಿರಂತರ ಹೋರಾಟವನ್ನು ಕುರಿತು ನೀವು ತಿಳಿದಿದ್ದೀರಿ. ದಲಿತ ವಿಮೋಚನೆಯ ಬಹುತೇಕ ಬರಹಗಳಲ್ಲಿ ಡಾ. ಅಂಬೇಡ್ಕರ್‌ರವರು ಒಂದು ಪ್ರತೀಕದ ರೀತಿಯಲ್ಲಿ ಮತ್ತು ಒಬ್ಬ ಸ್ಫೂರ್ತಿದಾಯಕ ವ್ಯಕ್ತಿತ್ವದಂತೆ ಚಿತ್ರಿತಗೊಂಡಿದ್ದರೆ ಅದು ಅಚ್ಚರಿಯೇನಲ್ಲ.

### ಉಗಮ

ಹತ್ತೊಂಬತ್ತನೂರ ಎಪ್ಪತ್ತರ ದಶಕದ ಆರಂಭದಲ್ಲಿ ಮೊದಲ ತಲೆಮಾರಿನ ದಲಿತ ಪದವೀಧರರು, ಅದರಲ್ಲೂ ಮುಖ್ಯವಾಗಿ ನಗರದ ಕೊಳೆಗೇರಿಗಳಲ್ಲಿ ವಾಸಿಸುತ್ತಿದ್ದವರು ತಮ್ಮ ಹಕ್ಕುಗಳು ಮತ್ತು ಅಭಿಪ್ರಾಯವನ್ನು ವಿವಿಧ ವೇದಿಕೆಗಳ ಮೂಲಕ ಸಮರ್ಥಿಸಿಕೊಳ್ಳತೊಡಗಿದರು. ಈ ಜಾಗೃತಿಯ ಅಂಗವಾಗಿ 1972ರಲ್ಲಿ ಮಹಾರಾಷ್ಟ್ರದ ದಲಿತ ಯುವಕರ ದಲಿತ್ ಪ್ಯಾಂಥರ್ಸ್ ಎಂಬ ಒಂದು ತೀವ್ರಗಾಮಿ ಸಂಘಟನೆಯು ಜನ್ಮ ತಾಳಿತು. ಸಮಾನತೆ ಮತ್ತು ನ್ಯಾಯಗಳನ್ನು ಕುರಿತ ಸಾಂವಿಧಾನಿಕ ಭರವಸೆಗಳ ಹೊರತಾಗಿಯೂ ದಲಿತರು ಎದುರಿಸುತ್ತಿದ್ದ ಜಾತಿಯಾಧಾರಿತ ನಿರಂತರ ಅಸಮಾನತೆಗಳು ಹಾಗೂ ಭೌತಿಕ ತಾರತಮ್ಯಗಳ ವಿರುದ್ಧ ದಲಿತರು ಪ್ರಮುಖ ಹೋರಾಟವನ್ನು ನಡೆಸಿದ್ದರು. ಮೀಸಲಾತಿಯನ್ನು ಮತ್ತು ಅಂತಹ ಸಾಮಾಜಿಕ ನ್ಯಾಯವನ್ನು ಕುರಿತ ಇತರ ನೀತಿಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರುವುದು ಅವರ ಆದ್ಯ ಬೇಡಿಕೆಗಳಲ್ಲಿ ಒಂದಾಗಿತ್ತು.




ಆಗಿನಿಂದ ದಲಿತರ ಸ್ಥಿತಿಗತಿಯಲ್ಲಿ ಹೆಚ್ಚಿನ ಬದಲಾವಣೆಯಾಗಿದೆಯೆ ? ದಲಿತರ ಮೇಲಿನ ದೌರ್ಜನ್ಯಗಳ ಬಗೆಗೆ ನಾನು ಓದುತ್ತಲೇ ಇದ್ದೇನೆ. ಈ ಚಳುವಳಿಗಳು ವಿಫಲವಾದವೇ? ಅಥವಾ ಇದು ಇಡೀ ಸಮಾಜದ ವೈಫಲ್ಯವೆ?

ಭಾರತದ ಸಂವಿಧಾನವು ಅಸ್ಪೃಶ್ಯತೆಯ ಪದ್ಧತಿಯನ್ನು ರದ್ದುಗೊಳಿಸಿದೆ ಎಂಬುದು ನಿಮಗೆ ಗೊತ್ತಿದೆ. ಈ ಉದ್ದೇಶಕ್ಕಾಗಿ 1960 ಮತ್ತು 1970ರ ದಶಕಗಳಲ್ಲಿ ಸರಕಾರವು ಕಾನೂನುಗಳನ್ನು ಜಾರಿಗೆ ತಂದಿದೆ. ಆದರೂ ಹಿಂದೆ ಅಸ್ಪೃಶ್ಯರೆಂದು ಕರೆಸಿಕೊಳ್ಳುತ್ತಿದ್ದ ಸಮುದಾಯಗಳ ನಿಟ್ಟಿನ ಸಾಮಾಜಿಕ ತಾರತಮ್ಯ ಮತ್ತು ಹಿಂಸೆಗಳು ಬೇರೆ ಬೇರೆ ವಿಧದಲ್ಲಿ ನಡೆಯುತ್ತಲೇ ಇವೆ. ದಲಿತರ ಕೇರಿಗಳನ್ನು ಹಳ್ಳಿಯ ಮುಖ್ಯ ಭಾಗದಿಂದ ಬೇರ್ಪಡಿಸಿ ದೂರದಲ್ಲಿರಿಸುವುದು ಮುಂದುವರಿದಿದೆ. ಎಲ್ಲರಿಗೂ ಸೇರಿದ ಕುಡಿಯುವ ನೀರಿನ ಮೂಲಗಳನ್ನು ಇವರು ಬಳಸುವಂತಿಲ್ಲ. ದಲಿತ ಮಹಿಳೆಯರ ಅವಮರ್ಯಾದೆ, ದುರುಪಯೋಗ ಹಾಗೂ ಎಲ್ಲಕ್ಕಿಂತ ಹೆಚ್ಚಾಗಿ ಚಿಕ್ಕಪುಟ್ಟ, ಜಾತಿ ಅಭಿಮಾನದ ಸಾಂಕೇತಿಕ ವಿಷಯಗಳಿಗೆ ಸಂಬಂಧಿಸಿದಂತೆ ದಲಿತರ ಮೇಲೆ ಸಾಮೂಹಿಕ ದುಷ್ಕೃತ್ಯಗಳು ನಡೆಯುತ್ತಿದ್ದವು. ದಲಿತರ ಆರ್ಥಿಕ ಮತ್ತು ಸಾಮಾಜಿಕ ಶೋಷಣೆಗಳನ್ನು ತಡೆಯುವಲ್ಲಿ ಕಾನೂನು ಕ್ರಮಗಳು ಅಸಮರ್ಪಕವೆಂದು ಸಾಬೀತಾದವು. ಮತ್ತೊಂದೆಡೆ, ದಲಿತರು ಬೆಂಬಲಿಸುತ್ತಿದ್ದ ಭಾರತೀಯ ರಿಪಬ್ಲಿಕನ್ ಪಕ್ಷದಂತಹ ರಾಜಕೀಯ ಪಕ್ಷಗಳು ಚುನಾವಣಾ ರಾಜಕೀಯದಲ್ಲಿ ಯಶಸ್ಸು ಕಾಣಲಿಲ್ಲ; ಈ ಪಕ್ಷಗಳು ಯಾವಾಗಲೂ ಅಂಚಿನಲ್ಲಿಯೇ ಉಳಿದವು: ಚುನಾವಣೆಗಳನ್ನು ಗೆಲ್ಲಲು ಇತರ ಪಕ್ಷಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳಬೇಕಿತ್ತು ಮತ್ತು ನಿರಂತರ ಒಡುಕುಗಳನ್ನು ಎದುರಿಸಬೇಕಿತ್ತು. ಹೀಗಾಗಿ ದಲಿತರ ಹಕ್ಕುಗಳನ್ನು ಸಮರ್ಥಿಸಿಕೊಳ್ಳಲು ದಲಿತ್ ಪ್ಯಾಂಥರ್ಸ್ ಸಂಘಟನೆಯು ಸಾಮೂಹಿಕ ಕಾರ್ಯಚಟುವಟಿಕೆಗಳನ್ನು ಅವಲಂಬಿಸಬೇಕಾಯಿತು.

**ಚಟುವಟಿಕೆಗಳು**

ದಲಿತ್ ಪ್ಯಾಂಥರ್ಸ್ ಚಟುವಟಿಕೆಗಳು ರಾಜ್ಯದ ಅನೇಕ ಭಾಗಗಳಲ್ಲಿ ದಲಿತರ ಮೇಲೆ ಹೆಚ್ಚುತ್ತಿದ್ದ ದೌರ್ಜನ್ಯಗಳ ವಿರುದ್ಧದ ಹೋರಾಟವನ್ನು ಬಹುತೇಕವಾಗಿ ಕೇಂದ್ರೀಕರಿಸಿದ್ದವು. ದಲಿತರ ಮೇಲಾಗುತ್ತಿದ್ದ ದೌರ್ಜನ್ಯಗಳ ವಿಷಯವನ್ನು ಕುರಿತ ದಲಿತ್ ಪ್ಯಾಂಥರ್ಸ್ ಮತ್ತು ಅದೇ ರೀತಿಯ ಉದ್ದೇಶವನ್ನು ಹೊಂದಿದ ಇತರ ಸಂಘಟನೆಗಳ ಸತತ ಪ್ರತಿಭಟನೆಗಳ ಫಲವಾಗಿ 1989ರಲ್ಲಿ ಸರಕಾರವು ಒಂದು ವಿಸ್ತೃತ ವ್ಯಾಪ್ತಿಯ ಕಾನೂನನ್ನು ಜಾರಿಗೆ ತಂದಿತು. ಈ ಕಾನೂನು ಅಂತಹ ದೌರ್ಜನ್ಯಗಳನ್ನು ಎಸಗುವವರಿಗೆ ಕಠಿಣ ಶಿಕ್ಷೆಯನ್ನು ವಿಧಿಸುತ್ತದೆ. ಜಾತಿ ಪದ್ಧತಿಯ ನಾಶ ಮತ್ತು ಅದರ ಜೊತೆಗೆ ದಲಿತರನ್ನು ಒಳಗೊಂಡಂತೆ, ಭೂರಹಿತ ಬಡ ರೈತರು ಮತ್ತು ನಗರ ಪ್ರದೇಶದ ಕೈಗಾರಿಕಾ

ಕಾರ್ಮಿಕರಂತಹ ಎಲ್ಲಾ ಶೋಷಿತ ವರ್ಗಗಳ ಸಂಘಟನೆಯೊಂದನ್ನು ರೂಪಿಸುವುದು ಪ್ಯಾಂಥರ್ಸ್ ಸಂಘಟನೆಯ ಸೈದ್ಧಾಂತಿಕ ಕಾರ್ಯಸೂಚಿಯಾಗಿತ್ತು.

ಈ ಚಳುವಳಿಯು ಶಿಕ್ಷಣವನ್ನು ಪಡೆದ ದಲಿತ ಯುವಕರಿಗೆ ತಮ್ಮ ಸೃಜನಶೀಲತೆಯನ್ನು ಪ್ರತಿಭಟನೆಯ ಒಂದು ಚಟುವಟಿಕೆಯನ್ನಾಗಿ ಬಳಸಿಕೊಳ್ಳಲು ವೇದಿಕೆಯೊಂದನ್ನು ಕಲ್ಪಿಸಿಕೊಟ್ಟಿತು. ಆ ಸಮಯದಲ್ಲಿ, ದಲಿತ ಲೇಖಕರು ಜಾತಿ ವ್ಯವಸ್ಥೆಯ ಕ್ರೌರ್ಯಗಳನ್ನು ತಮ್ಮ ಅನೇಕ ಆತ್ಮಕಥನಗಳು ಮತ್ತು ಇತರ ಸಾಹಿತ್ಯಿಕ ಬರಹಗಳಲ್ಲಿ ಪ್ರತಿಭಟಿಸಿದರು. ಈ ಪುಸ್ತಕಗಳು ಭಾರತೀಯ ಸಮಾಜದಲ್ಲಿ ಅತ್ಯಂತ ತುಳಿತಕ್ಕೆ ಒಳಗಾದ ಅನೇಕ ಸಾಮಾಜಿಕ ವರ್ಗಗಳ ಜೀವನಾನುಭವವನ್ನು ಚಿತ್ರಿಸುತ್ತ ಮರಾಠಿ ಸಾಹಿತ್ಯ ಲೋಕದಲ್ಲಿ ಸಂಚಲನವನ್ನುಂಟುಮಾಡಿದ್ದಲ್ಲದೆ, ಸಾಹಿತ್ಯದ ವ್ಯಾಪ್ತಿಯನ್ನು ಹೆಚ್ಚು ಹಿಗ್ಗಿಸಿ, ಸಾಹಿತ್ಯವು ಸಮಾಜದ ವಿವಿಧ ವರ್ಗಗಳನ್ನು ಪ್ರತಿನಿಧಿಸುವಂತೆ ಮಾಡಿದವು, ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ವಾಗ್ವಾದಗಳನ್ನು ಆರಂಭಿಸಿದವು. ತುರ್ತು ಪರಿಸ್ಥಿತಿಯ ನಂತರದ ಅವಧಿಯಲ್ಲಿ, ದಲಿತ್ ಪ್ಯಾಂಥರ್ಸ್ ಸಂಘಟನೆಯು ಚುನಾವಣಾ ಹೊಂದಾಣಿಕೆಗಳಲ್ಲಿ ಭಾಗಿಯಾಗಿ; ಹಲವು ಹೋಳಾಯಿತು. ಇದು ಅದರ ವೈಫಲ್ಯಕ್ಕೆ ಕಾರಣವಾಯಿತು. ಮುಂದೆ ಈ ಜಾಗವನ್ನು ಹಿಂದುಳಿದ ಮತ್ತು ಅಲ್ಪಸಂಖ್ಯಾತ ಸಮುದಾಯಗಳ ನೌಕರರ ಒಕ್ಕೂಟದಂತಹ ಸಂಘಟನೆಗಳು (BAMCEF) ತಮ್ಮ ವಶಕ್ಕೆ ಪಡೆದವು.




ಗುಪ್ತ ವರ್ಣಭೇದ

ದಲಿತ ಮಹಿಳೆಯರು

ಶಿಕ್ಷಣವನ್ನು ಅರ್ಧಕ್ಕೇ ನಿಲ್ಲಿಸಿದವರ ಪ್ರಮಾಣ:

ಶಿಕ್ಷಣದ ಪ್ರತೀ ಹಂತದಲ್ಲಿಯೂ ಅರ್ಧಕ್ಕೇ ಶಿಕ್ಷಣವನ್ನು ನಿಲ್ಲಿಸಿದ ಪರಿಶಿಷ್ಟ ಜಾತಿಯ ಹೆಣ್ಣುಮಕ್ಕಳ ಪ್ರಮಾಣವು ಪರಿಶಿಷ್ಟ ಜಾತಿಯ ಬಾಲಕರ ಅಥವಾ ಸಾಮಾನ್ಯ ವರ್ಗದ ಹೆಣ್ಣುಮಕ್ಕಳ ಪ್ರಮಾಣಕ್ಕಿಂತ ಹೆಚ್ಚಿದೆ.

ಮುಂದಿನ ಹಂತದ ಉನ್ನತ ಶಿಕ್ಷಣಕ್ಕೆ ಮತ್ತು ಭವಿಷ್ಯದ ಉದ್ಯೋಗಕ್ಕೆ ಅತೀ ಮುಖ್ಯವಾದ ಹಂತವೆನಿಸಿದ ಮಾಧ್ಯಮಿಕ ಹಂತದಲ್ಲಿ, ಶೇಕಡ 83ಕ್ಕಿಂತಲೂ ಹೆಚ್ಚಿನ ಪರಿಶಿಷ್ಟ ಜಾತಿಯ ಹೆಣ್ಣುಮಕ್ಕಳು ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಿರುವುದು ದುರಂತವೇ ಸರಿ.

1988-89, 1990-91ರ ನಡುವೆ ಶಾಲೆಗೆ ಹೋಗುತ್ತಿದ್ದ ಸಾಮಾನ್ಯ ವರ್ಗದ ಹೆಣ್ಣುಮಕ್ಕಳು ಶಿಕ್ಷಣವನ್ನು ಅರ್ಧಕ್ಕೇ ನಿಲ್ಲಿಸಿದ್ದರ ಪ್ರಮಾಣವು ಪ್ರತೀ ಹಂತದಲ್ಲಿಯೂ 3ರಿಂದ 4 ಪ್ರತಿಶತ ಕಡಮೆಯಾದಾಗ್ಯೂ, ಆರಂಭಿಕ ಶಿಕ್ಷಣದ ಮಟ್ಟಿಗೆ ಅತೀ ಮುಖ್ಯವಾದ ಹಂತಗಳೆನಿಸಿದ ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತಗಳಲ್ಲಿ ಪರಿಶಿಷ್ಟ ಜಾತಿಯ ಹೆಣ್ಣುಮಕ್ಕಳ ಶಿಕ್ಷಣವು ಅರ್ಧಕ್ಕೇ ನಿಂತಿದ್ದರ ಪ್ರಮಾಣವು ಅದೇ ಅವಧಿಯಲ್ಲಿ ಯಾವ ವ್ಯತ್ಯಾಸವನ್ನೂ ಕಾಣಲಿಲ್ಲ.ಅದರ ಪರಿಣಾಮವಾಗಿ ಪರಿಶಿಷ್ಟ ಜಾತಿ ಮತ್ತು ಸಾಮಾನ್ಯ ವರ್ಗದ ಹೆಣ್ಣುಮಕ್ಕಳು ಶಿಕ್ಷಣವನ್ನು ಅರ್ಧಕ್ಕೇ ನಿಲ್ಲಿಸಿದ್ದರ ಪ್ರಮಾಣದಲ್ಲಿನ ಅಂತರವು ಈ ಎರಡೂ ಹಂತಗಳಲ್ಲಿ ಮೂರೇ ವರ್ಷಗಳಲ್ಲಿ 3ರಿಂದ 4 ಪ್ರತಿಶತ ವಿಸ್ತೃತಗೊಂಡಿದೆ!

ಅಡಿಗೆ ಮುಂತಾದ ಮನೆಗೆಲಸದಲ್ಲಿ ಮತ್ತು ಕೃಷಿಯಲ್ಲಿ ಬಾಲಕಿಯರ ದುಡಿಮೆ ಬೇಕಿದೆ. ಬಡವರಿಗೆ, ಕೃಷಿ ಕಾರ್ಮಿಕರಿಗೆ ಹೆಣ್ಣುಮಕ್ಕಳ ಶಿಕ್ಷಣಕ್ಕಾಗಿ ಹಣವನ್ನು ವ್ಯಯಿಸುವುದು ಕಷ್ಟವಾಗುತ್ತದೆ. ಹಾಗಾಗಿ ಶಾಲಾ ಶಿಕ್ಷಣವನ್ನು ಅರ್ಧಕ್ಕೇ ಕೈಬಿಟ್ಟವರ ಪ್ರಮಾಣಕ್ಕೆ ಸಂಬಂಧಿಸಿದಂತೆ ಮೇಲು ಜಾತಿಯ ಹೆಣ್ಣುಮಕ್ಕಳು ಮತ್ತು ಬಾಲಕರ ಪ್ರಮಾಣಕ್ಕೆ ಹೋಲಿಸಿದರೆ ಪರಿಶಿಷ್ಟ ಜಾತಿ ಮತ್ತು ಪಂಗಡದ ಹೆಣ್ಣುಮಕ್ಕಳ ಪ್ರಮಾಣವು ಬಹಳ ಹೆಚ್ಚಿದೆ.

-ಎ. ಎಸ್. ಜಾಧವ್.,

(Dalit among Dalits: Scheduled catse and Scheduled Tribe Women" in Dalit women in India: issues and perspectives, Jogdand P.G. Gyan Publishing House, Pune, 1995, P. 182)

ಕೃಪೆ: ಅನಹದ್ ಮತ್ತು NCDHR




**ಗುಪ್ತ ವರ್ಣಭೇದ– ರಾಜಕೀಯ ಹಕ್ಕುಗಳು**

**ದಲಿತ ಮಹಿಳಾ ಸರಪಂಚರನ್ನು ವಜಾಮಾಡಲಾಯಿತು**

ಮಹಿಳಾ ಸರಪಂಚರಾದ ಸೇನ್ಮಾ ಪಶಾಬಾಯಿ ಸುಖಾಬಾಯಿ ಅವರು ತಮ್ಮ ಚುನಾಯಿತ ಸ್ಥಾನದಿಂದ ವಜಾಗೊಂಡಿದ್ದಾರೆ. ಅವರು ಪರಿಶಿಷ್ಟ ಜಾತಿಯ ಮೀಸಲು ಕ್ಷೇತ್ರವಾದ ಗುಜರಾತಿನ ಮೆಹಸಾನಾ ಜಿಲ್ಲೆ ಕಾಲೋಲ್ ತಾಲೂಕಿನ ಧೇಡಿಯಾ ಬನ್‌ಸಾಜದಾ ಗ್ರಾಮದಲ್ಲಿ ಸರಪಂಚರಾಗಿ ಚುನಾಯಿತರಾದ ತತ್‌ಕ್ಷಣ ಗ್ರಾಮದಲ್ಲಿ ಸುದೀರ್ಘ ಕಾಲದಿಂದಲೂ ಬಾಕಿ ಉಳಿದಿದ್ದ ಗ್ರಾಮೀಣರ ಮೂಲ ಸೌಕರ್ಯಗಳನ್ನು ಒದಗಿಸಿಕೊಡಲು ಮುಂದಾದರು. ಗ್ರಾಮದ ಎಲ್ಲರಿಗೂ ಲಭ್ಯವಾಗುವಂತೆ ಬೋರ್‌ವೆಲ್‌ಗಳನ್ನು ಅಗೆಸುವ ಮತ್ತು ನೀರಿನ ಸರಬರಾಜಿಗೆ ಪೈಪ್‌ಗಳನ್ನು ಅಳವಡಿಸುವ ಕಾರ್ಯದಲ್ಲಿ ಅವರು ಯಶಸ್ವಿಯಾದರು. ಹಿಂದೂ ಜಾತಿಯ ಜನಗಳಿಗೆ ಭಯವಾಗತೊಡಗಿತು. ಅವರು ಸರಪಂಚರ ಮೇಲೆ ಸುಳ್ಳು ಆಪಾದನೆಗಳನ್ನು ಮಾಡತೊಡಗಿದರಲ್ಲದೆ, ಜಿಲ್ಲಾ ಅಭಿವೃದ್ಧಿ ಅಧಿಕಾರಿಗಳನ್ನು ಒಪ್ಪಿಸಿ, ಸರಪಂಚರನ್ನು ಅಮಾನತ್ತಿನಲ್ಲಿಟ್ಟು, ಅಂತಿಮವಾಗಿ ಆಕೆಯನ್ನು ವಜಾಗೊಳಿಸಿದರು.

1999ರ ಅಕ್ಟೋಬರ್ 20ರಂದು ರಾಸರಿ ತಲಜಾ ವಶ್ರಮ್, ರಾಬರಿ ನಾರ್ದನ್ ಕಲ್ಯಾಣ್ ಮತ್ತು ರಾಹರಿ ಗಫೂರ್ ಅವರು, ಕಲ್ಯಾಣ್ ಸರಪಂಚರ ಪತಿಯಾದ ಪಶಾಭಾಯಿ ಸುಖಾಭಾಯಿಯವರನ್ನು ಕೊಲೆ ಮಾಡುವ ಉದ್ದೇಶದಿಂದ ಅವರ ತಲೆಯ ಮೇಲೆ ಚೂಪಾದ ತುದಿಯುಳ್ಳ ಅಸ್ತ್ರದಿಂದ ದಾಳಿ ಮಾಡಿದರು. ಪಶಾಭಾಯಿ ಸುಖಾಭಾಯಿಯವರ ಕಾಲನ್ನು ಮುರಿಯಲಾಯಿತಲ್ಲದೆ, ಅವರನ್ನು ತೀವ್ರವಾಗಿ ಗಾಯಗೊಳಿಸಿದರು. ಪಶಾಭಾಯಿಯವರ ಎದೆಗೂ ಹೊಡೆದಿದ್ದರು, ಅವರ ಹೊಟ್ಟೆಗೆ ಒಂದು ಲೋಹದ ಸಲಾಕೆ ಮತ್ತು ಕೋಲಿನಿಂದ ಮತ್ತೆಮತ್ತೆ ಹೊಡೆಯಲಾಯಿತು. ಬಿಹಾರದಲ್ಲಾದ ಎರಡು ಸುತ್ತಿನ ಪಂಚಾಯತ್ ಚುನಾವಣೆಯಲ್ಲಿ ಬಹುಪಾಲು ದಲಿತರ ಮತದಾನದ ಹಕ್ಕನ್ನು ನಿರಾಕರಿಸಲಾಯಿತು. ವೈಶಾಲಿ ಜಿಲ್ಲೆಯ ಮಹ್ನಾರ್ ವಿಭಾಗದಲ್ಲಿ ರವಿವಾರ ಬಾಂಬೊಂದು ಸಿಡಿದು ನಾಲ್ಕು ದಲಿತರ ಜೀವವನ್ನು ಬಲಿತೆಗೆದುಕೊಂಡಿತು. ಹಾಜಿಪುರ, ಫುಲ್ವಾರಿ, ಬರ್ಹ್‌ನ ಮತದಾನ ಕೇಂದ್ರಗಳಲ್ಲಿ ಸಮಾಜದ ದುರ್ಬಲ ವರ್ಗದವರಿಗೆ ಮತದಾನದ ಹಕ್ಕನ್ನು ನಿರಾಕರಿಸಲಾಯಿತು.

**ದಿ ಟೈಮ್ಸ್ ಆಫ್ ಇಂಡಿಯ, 19 ಎಪ್ರಿಲ್ 2001, ಪಟ್ನಾ**

ಬಹಳ ಹಿಂದಿನಿಂದಲೂ ಈ ದೇಶದ ರಾಜಕೀಯ ಅಧಿಕಾರವು ಕೆಲವೇ ಜನರ ಕೈಯ್ಯಲ್ಲಿದೆ ಮತ್ತು ಹೆಚ್ಚಿನವರು ಹೊರೆ ಹೊತ್ತ ಮೃಗಗಳಾಗಿರುವುದು ಮಾತ್ರವಲ್ಲ ಬೇಟೆಯ ಪ್ರಾಣಿಗಳೂ ಆಗಿದ್ದಾರೆ. ಭಾರತ ಸರಕಾರವು ಹಿಂದೂಗಳು, ಮುಸ್ಲಿಮರು ಮತ್ತು ಅಸ್ಪೃಶ್ಯರು ಎಲ್ಲರಿಗೂ ಸೇರಿದ್ದು. ಪರಿಶಿಷ್ಟ ಜಾತಿಗಳಿಗೆ ರಾಷ್ಟ್ರೀಯ ಸರಕಾರದ ನಿರ್ವಹಣೆಯಲ್ಲಿ ಸಮರ್ಪಕವಾದ ಪಾಲು ಸಿಗದಿದ್ದರೆ ಅದನ್ನು ಸಾಧಿಸಲು ಹೋರಾಟ ನಡೆಸಬೇಕು.

ಡಾ. ಬಿ. ಆರ್. ಅಂಬೇಡ್ಕರ್

## ಭಾರತೀಯ ಕಿಸಾನ್ ಒಕ್ಕೂಟ

ಎಪ್ಪತ್ತರ ದಶಕದ ನಂತರ ಭಾರತೀಯ ಸಮಾಜದಲ್ಲಿನ ಅಸಮಾಧಾನವು ನಾನಾ ರೂಪಗಳಲ್ಲಿತ್ತು. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸ್ವಲ್ಪಮಟ್ಟಿನ ಲಾಭ ಪಡೆದ ಗುಂಪುಗಳಿಗೂ ಸರಕಾರ ಮತ್ತು ರಾಜಕೀಯ

ಪಕ್ಷಗಳ ವಿರುದ್ಧ ಹಲವು ದೂರುಗಳಿದ್ದವು. ಎಂಬತ್ತರ ದಶಕದ ಕೃಷಿಕರ ಹೋರಾಟಗಳು ಅದಕ್ಕೆ ಒಂದು ಉದಾಹರಣೆ, ಅದರಲ್ಲಿ ಉತ್ತಮ ಸ್ಥಿತಿಯಲ್ಲಿದ್ದ ರೈತರೂ ಸರಕಾರದ ನೀತಿಗಳ ವಿರುದ್ಧ ಪ್ರತಿಭಟನೆ ನಡೆಸಿದರು.

**ಬೆಳವಣಿಗೆ**

1988ರ ಜನವರಿಯಲ್ಲಿ ಉತ್ತರ ಪ್ರದೇಶದ ಮೀರತ್‌ನಲ್ಲಿ ಸುಮಾರು ಇಪ್ಪತ್ತು ಸಾವಿರ ರೈತರು ನೆರೆದಿದ್ದರು. ಸರಕಾರವು ವಿದ್ಯುತ್ ದರಗಳನ್ನು ಏರಿಸಲು ಕೈಕೊಂಡ ನಿರ್ಧಾರವನ್ನು ಪ್ರತಿಭಟಿಸಲು ಅವರೆಲ್ಲ ಒಟ್ಟುಗೂಡಿದ್ದು, ರೈತರು ತಮ್ಮ ಬೇಡಿಕೆ ಈಡೇರುವ ತನಕ ಜಿಲ್ಲಾಧಿಕಾರಿಯ ಕಛೇರಿಯ ಹೊರಗೆ ಬಿಡಾರ ಹೂಡಿದ್ದರು. ಅದು ರೈತರ ಒಂದು ಶಿಸ್ತುಬದ್ಧವಾದ ಪ್ರತಿಭಟನೆಯಾಗಿತ್ತು ಮತ್ತು ಹತ್ತಿರದ ಹಳ್ಳಿಗಳಿಂದ ನಿಯತವಾಗಿ ಆಹಾರವನ್ನು ಸರಬರಾಜು ಮಾಡಲಾಗುತ್ತಿತ್ತು. ಮೀರತ್ ಹರತಾಳವನ್ನು ಗ್ರಾಮೀಣ ರೈತರ ಒಂದು ದೊಡ್ಡ ಪ್ರಮಾಣದ ಬಲಪ್ರದರ್ಶನದಂತೆ ಭಾವಿಸಲಾಯಿತು. ಹೀಗೆ ಪ್ರತಿಭಟನೆ ನಡೆಸುತ್ತಿದ್ದ ರೈತರು ಭಾರತೀಯ ಕಿಸಾನ್ ಒಕ್ಕೂಟದ (BKU) ಸದಸ್ಯರಾಗಿದ್ದರು. ಅದು ಪಶ್ಚಿಮ ಉತ್ತರಪ್ರದೇಶ ಮತ್ತು ಹರಿಯಾಣ ಕ್ಷೇತ್ರಗಳ ರೈತರ ಒಂದು ಸಂಘಟನೆಯಾಗಿದ್ದು, ಎಂಬತ್ತರ ದಶಕದಲ್ಲಿ ರೈತರ ಚಳುವಳಿಗಳಿಗೆ ಸಂಬಂಧಿಸಿದಂತೆ ಮುಂಚೂಣಿಯಲ್ಲಿದ್ದ ಒಂದು ರೈತ ಸಂಘಟನೆಯೆನಿಸಿತ್ತು.

ಮೂರನೆಯ ಅಧ್ಯಾಯದಲ್ಲಿ ಹೇಗೆ ಹರಿಯಾಣ, ಪಂಜಾಬ್ ಮತ್ತು ಪಶ್ಚಿಮ ಉತ್ತರಪ್ರದೇಶದ ರೈತರು 1960ರ ಉತ್ತರಭಾಗದಲ್ಲಿ 'ಹಸಿರು ಕ್ರಾಂತಿ'ಗೆ ಸಂಬಂಧಪಟ್ಟ ಸರಕಾರದ ನೀತಿಗಳ ಲಾಭ ಪಡೆದುಕೊಂಡರು ಎನ್ನುವುದನ್ನು ನಾವು ಗಮನಿಸಿದೆವು. ಆಗಿನಿಂದ ಕಬ್ಬು ಮತ್ತು ಗೋಧಿ ಆ ಪ್ರದೇಶದ ಮುಖ್ಯ ವಾಣಿಜ್ಯ ಬೆಳೆಗಳಾದವು. ಎಂಬತ್ತರ ದಶಕದ ಮಧ್ಯಭಾಗದಲ್ಲಿ ದೇಶದ ಆರ್ಥಿಕ ಉದಾರನೀತಿಯ ಪ್ರಕ್ರಿಯೆಗಳ ಆರಂಭದ ಫಲವಾಗಿ ವಾಣಿಜ್ಯ ಬೆಳೆಗಳ ಮಾರುಕಟ್ಟೆಯು ಬಿಕ್ಕಟ್ಟಿಗೆ ಈಡಾಗಿತ್ತು. ಆಗ ಭಾರತೀಯ ಕಿಸಾನ್ ಒಕ್ಕೂಟವು ಕಬ್ಬು ಮತ್ತು ಗೋಧಿಗೆ ಹೆಚ್ಚಿನ ಕನಿಷ್ಠದರವನ್ನು ನಿಗದಿ ಪಡಿಸುವುದು, ಕೃಷಿ ಉತ್ಪನ್ನಗಳ ಅಂತರರಾಜ್ಯ ಸಾಗಾಟದ ಮೇಲಿನ ನಿರ್ಬಂಧಗಳನ್ನು ತೆಗೆದುಹಾಕುವುದು, ನ್ಯಾಯಯುತ ದರದಲ್ಲಿ ವಿದ್ಯುತ್ ಪೂರೈಕೆಯನ್ನು ಖಾತರಿಪಡಿಸುವುದು, ಸಾಲಗಳಿಗೆ ಸಂಬಂಧಿಸಿದಂತೆ ಬಾಕಿಯಿರುವ ಮರುಪಾವತಿಗಳನ್ನು ಮನ್ನಾ ಮಾಡುವುದು ಮತ್ತು ರೈತರಿಗೆ ಸರಕಾರಿ ಪಿಂಚಣಿ ಸಿಗುವ ಅವಕಾಶವನ್ನು ಒದಗಿಸುವುದು ಮೊದಲಾದ ಬೇಡಿಕೆಗಳನ್ನು ಸರಕಾರದ ಮುಂದಿಟ್ಟಿತ್ತು.

ದೇಶದ ಇತರ ರೈತ ಸಂಘಟನೆಗಳೂ ಅದೇ ರೀತಿಯ ಬೇಡಿಕೆಗಳನ್ನು ಮುಂದಿಟ್ಟವು. ಮಹಾರಾಷ್ಟ್ರದ ಶೇತ್ಕಾರಿ ಸಂಘಟನೆಯು ರೈತ ಚಳುವಳಿಯನ್ನು ನಗರದ ಕೈಗಾರಿಕಾ ಕ್ಷೇತ್ರವನ್ನು ಸಂಕೇತಿಸುವ ಇಂಡಿಯಾದ ವಿರುದ್ಧ ಗ್ರಾಮೀಣ ಕೃಷಿ ಕ್ಷೇತ್ರವನ್ನು ಸಂಕೇತಿಸುವ ಭಾರತದ ಸಮರವೆಂಬುದಾಗಿ ಘೋಷಿಸಿತು. ಭಾರತದ ಅಭಿವೃದ್ಧಿಯ ಮಾದರಿಯಲ್ಲಿ ಕೈಗಾರಿಕೆಗಳು ಮತ್ತು ಕೃಷಿಯ ನಡುವಿನ ಚರ್ಚೆಗಳು ಪ್ರಮುಖ ವಿಷಯಗಳಾಗಿದ್ದವು ಎಂಬುದನ್ನು ಈಗಾಗಲೇ ಮೂರನೆಯ ಅಧ್ಯಾಯದಲ್ಲಿ ನೀವು ಅಭ್ಯಸಿಸಿದ್ದೀರಿ. ಎಂಬತ್ತರ ದಶಕದಲ್ಲಿ ಉದಾರೀಕರಣದ ಆರ್ಥಿಕ ನೀತಿಗಳ ಪರಿಣಾಮವಾಗಿ ಕೃಷಿ ಕ್ಷೇತ್ರವು ಅಪಾಯದಲ್ಲಿ ಸಿಲುಕಿದಾಗ ಅದೇ ಚರ್ಚೆಗಳು ಮತ್ತೆ ಜೀವ ತಳೆದವು.




ಪಂಜಾಬ್‌ನಲ್ಲಿ, ಭಾರತೀಯ ಕಿಸಾನ್ ಸಂಘಟನೆಯ ಜಮಾವಣೆ
ಕೃಪೆ: ಹಿಂದುಸ್ತಾನ್ ಟೈಮ್ಸ್




ಕೃಷಿಕನಾಗಲು ಬಯಸುತ್ತೇನೆ ಎನ್ನುವ ಯಾರನ್ನೂ ಎಂದೂ ನಾನು ಭೇಟಿ ಮಾಡಲಿಲ್ಲ. ದೇಶಕ್ಕೆ ಕೃಷಿಕರೂ ಬೇಕಲ್ಲವೆ?

## ಗುಣಲಕ್ಷಣಗಳು

ತಮ್ಮ ಬೇಡಿಕೆಗಳನ್ನು ಈಡೇರಿಸುವಂತೆ ಸರಕಾರವನ್ನು ಒತ್ತಾಯಿಸಲು ಭಾರತೀಯ ಕಿಸಾನ್ ಒಕ್ಕೂಟವು ಹಮ್ಮಿಕೊಂಡ ಚಟುವಟಿಕೆಗಳು; ಜಮಾವಣೆಗಳು, ಪ್ರದರ್ಶನಗಳು, ಧರಣಿ ಕೂರುವುದು ಮತ್ತು ಜೈಲ್ ಭರೋ ಚಳುವಳಿಗಳನ್ನು ಒಳಗೊಂಡಿದ್ದವಲ್ಲದೆ, ಈ ಪ್ರತಿಭಟನೆಗಳು, ಪಶ್ಚಿಮ ಉತ್ತರಪ್ರದೇಶದ ಹಳ್ಳಿಗಳು ಮತ್ತು ಅದರ ಪಕ್ಕದಲ್ಲಿನ ಪ್ರದೇಶಗಳಿಗೆ ಸೇರಿದ ಸಾವಿರಾರು ಹಾಗೂ ಕೆಲವೊಮ್ಮೆ ಲಕ್ಷಾಂತರ ರೈತರನ್ನು ತೊಡಗಿಸಿಕೊಂಡಿದ್ದವು. ಎಂಬತ್ತರ ಈ ದಶಕದ ಉದ್ದಕ್ಕೂ ಭಾರತೀಯ ಕಿಸಾನ್ ಒಕ್ಕೂಟವು ರಾಜ್ಯದ ಅನೇಕ ಜಿಲ್ಲಾ ಮುಖ್ಯ ಕೇಂದ್ರಗಳು ಮತ್ತು ರಾಷ್ಟ್ರದ ರಾಜಧಾನಿಯಲ್ಲಿಯೂ ಬೃಹತ್ ಪ್ರತಿಭಟನಾ ಜಮಾವಣೆಗಳನ್ನು ಆಯೋಜಿಸಿತ್ತು. ಈ ಸಂಘಟನೆಗಳ ಮತ್ತೊಂದು ಹೊಸ ಅಂಶವೆಂದರೆ ರೈತರ ಜಾತಿ ಸಂಯೋಜನೆಗಳ ಬಳಕೆ. ಭಾರತ್ ಕಿಸಾನ್ ಒಕ್ಕೂಟದ ಹೆಚ್ಚಿನ ಸದಸ್ಯರು ಏಕೈಕ ಸಮುದಾಯಕ್ಕೆ ಸೇರಿದವರಾಗಿದ್ದರು. ಆರ್ಥಿಕ ವಿಷಯಗಳ ನಿಟ್ಟಿನಲ್ಲಿ ಅವರನ್ನು ಒಟ್ಟುಗೂಡಿಸಲು ಸಂಘಟನೆಯು ಈ ಸಮುದಾಯಗಳ ಸಾಂಪ್ರದಾಯಿಕ ಜಾತಿ ಪಂಚಾಯತ್‌ಗಳನ್ನು ಬಳಸಿತು. ಯಾವುದೇ ಔಪಚಾರಿಕ ಸಂಘಟನೆಯಿಲ್ಲದಾಗ್ಯೂ, ಕಿಸಾನ್ ಒಕ್ಕೂಟವು ತನ್ನ ಸದಸ್ಯರ

ಕುಲೀಯ ಜಾಲಬಂಧಗಳನ್ನು(clan network) ಆಧರಿಸಿದ್ದ ಕಾರಣ ದೀರ್ಘಕಾಲದವರೆಗೆ ಉಳಿಯಿತು. ಈ ಸಂಪರ್ಕಗಳ ಮೂಲಕ ಹಣ, ಸಂಪನ್ಮೂಲಗಳು ಮತ್ತು ಚಟುವಟಿಕೆಗಳು ಸಂಘಟಿಸಲ್ಪಡುತ್ತಿದ್ದವು.

ತೊಂಬತ್ತರ ದಶಕದ ಮೊದಲ ಭಾಗದವರೆಗೂ ಕಿಸಾನ್ ಒಕ್ಕೂಟವು ಎಲ್ಲ ರಾಜಕೀಯ ಪಕ್ಷಗಳಿಂದ ದೂರವುಳಿದಿತ್ತು. ಕೇವಲ ಸದಸ್ಯರ ಸಂಖ್ಯಾಬಲದಿಂದಲೇ ಅದು ರಾಜಕೀಯದಲ್ಲಿ ಒತ್ತಡ ಹೇರುವ ಗುಂಪಿನಂತೆ ಕೆಲಸ ಮಾಡುತ್ತಿತ್ತು. ಈ ಸಂಘಟನೆಯು ಇತರ ರಾಜ್ಯಗಳ ಸಂಘಟನೆಗಳೊಂದಿಗೆ ಸೇರಿ ತಮ್ಮ ಕೆಲವು ಆರ್ಥಿಕ ಬೇಡಿಕೆಗಳಿಗೆ ಒಪ್ಪಿಗೆ ಪಡೆಯುವಲ್ಲಿ ಯಶಸ್ವಿಯಾಯಿತು. ಈ ನಿಟ್ಟಿನಲ್ಲಿ ರೈತರ ಚಳುವಳಿಯು ಎಂಬತ್ತರ ದಶಕದಲ್ಲಿ ಅತೀ ಹೆಚ್ಚು ಯಶಸ್ಸನ್ನು ಕಂಡ ಸಾಮಾಜಿಕ ಚಳುವಳಿಗಳಲ್ಲಿ ಒಂದೆನಿಸಿತು. ಈ ಚಳುವಳಿಯ ಯಶಸ್ಸು ಅದರ ಸದಸ್ಯರು ಹೊಂದಿದ್ದ ರಾಜಕೀಯ ಒಪ್ಪಂದದ ಸಾಮರ್ಥ್ಯಗಳ ಫಲ ಎನ್ನಬಹುದು. ಈ ಚಳುವಳಿಯು ದೇಶದ ಸಮೃದ್ಧ ರಾಜ್ಯಗಳಲ್ಲಿ ಪ್ರಮುಖವಾಗಿ ಸಕ್ರಿಯವಾಗಿತ್ತು. ಜೀವನೋಪಾಯಕ್ಕಾಗಿ ಕೃಷಿಯಲ್ಲಿ ತೊಡಗುವ ದೇಶದ ಹೆಚ್ಚಿನ ರೈತ ಸಮುದಾಯದಂತಲ್ಲದೇ ಭಾರತೀಯ ಕಿಸಾನ್ ಒಕ್ಕೂಟದಂತಹ ಸಂಘಟನೆಗಳ ಸದಸ್ಯರು ಮಾರುಕಟ್ಟೆಗಳಿಗಾಗಿ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿದ್ದರು. ಭಾರತೀಯ ಕಿಸಾನ್ ಒಕ್ಕೂಟದಂತೆ ರಾಜ್ಯಗಳಾದ್ಯಂತದ ಸಂಘಟನೆಗಳು ಪ್ರಾದೇಶಿಕವಾಗಿ ಚುನಾವಣಾ ರಾಜಕೀಯದಲ್ಲಿ ಪ್ರಾಬಲ್ಯವನ್ನು ಹೊಂದಿದ ಸಮುದಾಯಗಳಿಂದ ಸದಸ್ಯರನ್ನು ಆರಿಸಿಕೊಂಡವು. ಮಹಾರಾಷ್ಟ್ರದ ಶೇತ್ಕಾರಿ ಸಂಘಟನೆಯ ಮತ್ತು ಕರ್ನಾಟಕದ ರೈತ ಸಂಘಗಳು ರೈತರ ಅಂತಹ ಸಂಘಟನೆಗಳಿಗೆ ಪ್ರಮುಖವಾದ ಉದಾಹರಣೆಗಳಾಗಿವೆ.


Kisan union wants agriculture out of WTO purview

By Our Staff Correspondent

MYSORE, FEB. 15. The Bharatiya Kisan Union has warned of socio-economic upheavals in the country if India does not bargain to keep agriculture out of the purview of the World Trade Organisation (WTO).

Addressing a press conference here today, the chief of the union, Mahendra Singh Tikait, and its national coordinating committee convener, M. Yudhveer Singh, warned of the impending dangers if India goes ahead and agrees to the stipulations of the WTO in the next round of meeting scheduled to be held in Hong Kong in November.

The leaders said a farmers' rally will be taken out in New Delhi on March 17 to pressure the Government to keep agriculture out of the purview of the WTO. More than five lakh farmers from all over India are expected to attend the rally. Subsequently, the agitation will be intensified across the country.

The Hindu, Feb 16, 2005

ಕಿಸಾನ್ ಒಕ್ಕೂಟವು ಕೃಷಿಯನ್ನು ವಿಶ್ವ ವ್ಯಾಪಾರ ಸಂಘಟನೆಯ(WTO) ವ್ಯಾಪ್ತಿಯಿಂದ ಹೊರಗಿಡುವಂತೆ ಎಚ್ಚರಿಸಿದೆ

ನಮ್ಮ ಪ್ರತಿನಿಧಿಯಿಂದ
ಮೈಸೂರು, ಫೆಬ್ರವರಿ. 15. ಭಾರತವು ವಿಶ್ವ ವ್ಯಾಪಾರೀ ಸಂಸ್ಥೆಯ (WTO) ವ್ಯಾಪ್ತಿಯಿಂದ ಕೃಷಿಯನ್ನು ಹೊರಗಿಡಲು ಒಂದು ಒಪ್ಪಂದಕ್ಕೆ ಬರದಿದ್ದಲ್ಲಿ, ದೇಶದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಏರಿಳಿತಗಳಾಗುತ್ತವೆ ಎಂದು ಭಾರತೀಯ ಕಿಸಾನ್ ಒಕ್ಕೂಟವು ಎಚ್ಚರಿಸಿದೆ.
ಇಂದು ಇಲ್ಲಿ ಪತ್ರಿಕಾ ಗೋಷ್ಠಿಯೊಂದನ್ನು ಉದ್ದೇಶಿಸಿ ಮಾತನಾಡುತ್ತ ಒಕ್ಕೂಟದ ಮುಖ್ಯಸ್ಥರಾದ ಮಹೇಂದ್ರ ಸಿಂಗ್ ಟಿಕಾಯತ್ ಮತ್ತು ಅದರ ರಾಷ್ಟ್ರೀಯ ಸಮನ್ವಯ ಸಮಿತಿಯ ಸಂಯೋಜಕರಾದ ಎಮ್. ಯದುವೀರ್ ಸಿಂಗ್ ಅವರು, ಹಾಂಕಾಂಗ್‌ನಲ್ಲಿ ನವೆಂಬರಿನಲ್ಲಿ ನಡೆಯಲಿರುವ ಮುಂದಿನ ಸುತ್ತಿನ ಮಾತುಕತೆಗಳಲ್ಲಿ ವಿಶ್ವ ವ್ಯಾಪಾರಿ ಸಂಸ್ಥೆಯ ಷರತ್ತುಗಳನ್ನು ಒಪ್ಪಿ ಭಾರತವು ಮುಂದುವರಿದಲ್ಲಿ, ಮುಂದಾಗಲಿರುವ ಅನಾಹುತಗಳ ಬಗೆಗೆ ಎಚ್ಚರಿಸಿದರು.
ವಿಶ್ವ ವ್ಯಾಪಾರಿ ಸಂಸ್ಥೆಯ ವ್ಯಾಪ್ತಿಯಿಂದ ಕೃಷಿಯನ್ನು ಹೊರಗಿಡುವಂತೆ ಸರಕಾರದ ಮೇಲೆ ಒತ್ತಡ ಹೇರಲು ಮಾರ್ಚ್ 17ರಂದು ದಿಲ್ಲಿಯಲ್ಲಿ ಒಂದು ರೈತರ ಜಮಾವಣೆಯನ್ನು ಆಯೋಜಿಸಲಾಗುವುದು ಎಂದು ಒಕ್ಕೂಟದ ನಾಯಕರು ಹೇಳಿದರು. ದೇಶಾದ್ಯಂತದ ಐದು ಲಕ್ಷಕ್ಕಿಂತಲೂ ಹೆಚ್ಚಿನ ರೈತರು ಈ ಜಮಾವಣೆಗೆ ಹಾಜರಾಗಬಹುದೆಂದು ನಿರೀಕ್ಷಿಸಲಾಗಿದೆ. ಅನಂತರ ಈ ಆಂದೋಲನವನ್ನು ದೇಶಾದ್ಯಂತ ತೀವ್ರಗೊಳಿಸಲಾಗುತ್ತದೆ.
ದಿ ಹಿಂದೂ, ಫೆಬ್ರುವರಿ 16, 2005




### ರಾಷ್ಟ್ರೀಯ ಮೀನು ಕಾರ್ಮಿಕರ ವೇದಿಕೆ

ಇಡೀ ಜಗತ್ತಿನ ಮೀನುಗಾರರ ಸಂಖ್ಯೆಯಲ್ಲಿ ಭಾರತದ ಮೀನುಗಾರರ ಸಮುದಾಯವು ಎರಡನೆ ದೊಡ್ಡ ಮೀನುಗಾರಿಕಾ ಸಮುದಾಯವಾಗಿದೆ ಎಂಬುದು ನಿಮಗೆ ತಿಳಿದಿದೆಯೆ? ನಮ್ಮ ದೇಶದ ಪೂರ್ವ ಮತ್ತು ಪಶ್ಚಿಮದ ಎರಡೂ ತೀರಗಳಲ್ಲಿ ಪ್ರಮುಖವಾಗಿ ಸ್ಥಳೀಯ ಮೀನುಗಾರ ಸಮುದಾಯಕ್ಕೆ ಸೇರಿದ ನೂರಾರು, ಸಾವಿರಾರು ಕುಟುಂಬಗಳು ಮೀನುಗಾರಿಕೆಯಲ್ಲಿ ತೊಡಗಿವೆ. ಭಾರತ ಸರಕಾರವು ತನ್ನ ಕಡಲುಗಳಲ್ಲಿ ಮೀನು ಹಿಡಿಯುವ ಯಾಂತ್ರೀಕೃತ ದೋಣಿಗಳ ಪ್ರವೇಶಕ್ಕೆ ಹಾಗೂ ದೊಡ್ಡ ಪ್ರಮಾಣದ ಮೀನುಗಾರಿಕೆಗಾಗಿ ತಳಮಟ್ಟದಲ್ಲಿ ಮೀನು ಹಿಡಿಯುವಂತಹ ತಂತ್ರಜ್ಞಾನಗಳಿಗೆ ಅನುಮತಿ ನೀಡಿದಾಗ

ಈ ಮೀನು ಕಾರ್ಮಿಕರ ಬದುಕು ದೊಡ್ಡ ಸಂಕಟಕ್ಕೆ ಸಿಲುಕಿತು. ಎಪ್ಪತ್ತು ಮತ್ತು ಎಂಬತ್ತರ ದಶಕದಾದ್ಯಂತ ಸ್ಥಳೀಯ ಮೀನುಗಾರ ಕಾರ್ಮಿಕರ ಸಂಘಟನೆಗಳು ತಮ್ಮ ಜೀವನೋಪಾಯದ ವಿಷಯಗಳನ್ನು ಕುರಿತು ರಾಜ್ಯ ಸರಕಾರಗಳೊಂದಿಗೆ ಸೆಣಸಿದವು. ಮೀನುಗಾರಿಕಾ ಉದ್ಯಮವು ರಾಜ್ಯದ ವ್ಯಾಪ್ತಿಗೆ ಸಂಬಂಧಪಟ್ಟ ವಿಷಯವಾದ್ದರಿಂದ ಮೀನುಗಾರರು ಬಹುತೇಕವಾಗಿ ಪ್ರಾದೇಶಿಕ ಮಟ್ಟದಲ್ಲಿ ಸಂಘಟಿಸಲ್ಪಟ್ಟರು.

ಎಂಬತ್ತರ ದಶಕದ ಮಧ್ಯಭಾಗದಲ್ಲಿ ಆರ್ಥಿಕ ಉದಾರೀಕರಣದ ನೀತಿಗಳ ಪ್ರವೇಶದಿಂದಾಗಿ ಈ ಸಂಘಟನೆಗಳು ರಾಷ್ಟ್ರೀಯ ಮೀನು ಕಾರ್ಮಿಕರ ವೇದಿಕೆ (NFF) ಎಂಬ ಒಂದು ರಾಷ್ಟ್ರಮಟ್ಟದ ವೇದಿಕೆಯ ಅಡಿಯಲ್ಲಿ ಸಂಘಟಿತರಾಗುವ ಅನಿವಾರ್ಯತೆ ಬಂದೊದಗಿತು. ಕೇರಳದ ಮೀನುಗಾರರು ಇತರ ರಾಜ್ಯಗಳ ಮಹಿಳಾ ಕಾರ್ಮಿಕರನ್ನೂ ಒಳಗೊಂಡು ತಮ್ಮ ಸಹ ಕಾರ್ಮಿಕರನ್ನು ಒಗ್ಗೂಡಿಸುವ ಪ್ರಮುಖ ಹೊಣೆಯನ್ನು ಹೊತ್ತರು. 1991ರಲ್ಲಿ NFF, ಕೇಂದ್ರ ಸರಕಾರದ ವಿರುದ್ಧ ತನ್ನ ಮೊದಲ ಕಾನೂನು ಸಮರದಲ್ಲಿ ಯಶಸ್ವಿಯಾದ ನಂತರ ರಾಷ್ಟ್ರೀಯ ಮೀನು ಕಾರ್ಮಿಕರ ವೇದಿಕೆಯು ಏಕೀಕೃತಗೊಂಡಿತು. ಇದು, ಭಾರತವು ಸಮುದ್ರದಾಳದ ಮೀನುಗಾರಿಕಾ ನೀತಿಯ ಮೂಲಕ ತನ್ನ ಕಡಲಿಗೆ, ಬಹುರಾಷ್ಟ್ರೀಯ ಮೀನುಗಾರಿಕಾ ಕಂಪೆನಿಗಳನ್ನೂ ಒಳಗೊಂಡು ದೊಡ್ಡ ಮಟ್ಟದ ವಾಣಿಜ್ಯ ದೋಣಿಗಳಿಗೆ ಪ್ರವೇಶವನ್ನಿತ್ತಾಗ ನಡೆಸಿದ ಪ್ರತಿಭಟನೆಯಾಗಿತ್ತು. ತೊಂಬತ್ತರ ದಶಕದುದ್ದಕ್ಕೂ NFF, ಸರಕಾರದೊಂದಿಗೆ ಅನೇಕ ಕಾನೂನಾತ್ಮಕ ಮತ್ತು ಸಾರ್ವಜನಿಕ ಸಮರಗಳನ್ನು ನಡೆಸಿತು. ಅದು ಲಾಭಕ್ಕಾಗಿ ಈ ವಲಯದಲ್ಲಿ ಹಣವನ್ನು ಹೂಡುವವರಿಗಿಂತ ಜೀವನೋಪಾಯಕ್ಕಾಗಿ ಮೀನುಗಾರಿಕೆಯನ್ನು ಕೈಗೊಂಡವರ ರಕ್ಷಣೆಯ ನಿಟ್ಟಿನಲ್ಲಿ ಹೋರಾಡಿತು. ಸರಕಾರವು ಮೀನು ಹಿಡಿಯುವ ವಿದೇಶೀ ದೋಣಿಗಳಿಗೆ ಪರವಾನಗಿ ಇತ್ತಾಗ ಅದು 2002ರ ಜುಲೈ ತಿಂಗಳಲ್ಲಿ ಸರಕಾರದ ನೀತಿಯ ವಿರುದ್ಧ ರಾಷ್ಟ್ರ ಮಟ್ಟದ ಪ್ರತಿಭಟನೆಗೆ ಕರೆ ನೀಡಿತು. ಪರಿಸರ ಮತ್ತು ಮೀನುಗಾರರ ಜೀವನಗಳ ಸಂರಕ್ಷಣೆಯ ಸಲುವಾಗಿ ಅದು ಜಗತ್ತಿನಾದ್ಯಂತದ ಇತರ ಭಾಗಗಳಲ್ಲಿ ಅದೇ ರೀತಿ ಕೆಲಸ ಮಾಡುತ್ತಿದ್ದ ಅನೇಕ ಸಂಘಟನೆಗಳೊಂದಿಗೆ ಕೈಜೋಡಿಸಿತು.

**ಸಾರಾಯಿ ನಿಷೇಧ ಚಳುವಳಿ**

ಭಾರತ್ ಕಿಸಾನ್ ಒಕ್ಕೂಟವು ಉತ್ತರದಲ್ಲಿ ರೈತರನ್ನು ಸಂಘಟಿಸುತ್ತಿರುವ ಸಮಯದಲ್ಲಿ ದಕ್ಷಿಣ ಭಾರತದ ಆಂಧ್ರಪ್ರದೇಶದ ಗ್ರಾಮೀಣ ಭಾಗಗಳಲ್ಲಿ ಅದಕ್ಕೆ ಸಂಪೂರ್ಣವಾಗಿ ಭಿನ್ನವಾದ ಒಂದು ಸಂಘಟನೆಯು ರೂಪುಗೊಳ್ಳುತ್ತಿತ್ತು. ಅದು, ತಮ್ಮ ಸುತ್ತಮುತ್ತಲ ಪ್ರದೇಶಗಳಲ್ಲಿನ ಸಾರಾಯಿ ಮಾರಾಟದ ಮೇಲೆ ನಿಷೇಧವನ್ನು ಆಗ್ರಹಿಸುವ ಮಹಿಳೆಯರ ಸ್ವಯಂಪ್ರೇರಿತ ಸಂಘಟನೆಯಾಗಿತ್ತು.






## Liquor Mafia take to Heels as Women Hit Back

The women of village Gundlur in Kalikari mandal of Chittoor district assembled and resolved to put an end to the sale of arrack in their village. They conveyed this resolution to the village arrack vendor. They turned back the jeep that brought arrack packets to the village. However, when the village arrack vendor informed the contractor about this, the contractor sent him a gang of men to help him resume sales. Women of the village were adamant and opposed this move. The contractor called in the police but even they had to beat a retreat. A week later, women who prevented the sale of arrack were assaulted by arrack contractor's goondas with iron rods and other lethal weapons. But when the women resisted the assault unitedly, the hired mafia took to their heels. The women later destroyed three jeeps full of arrack.

Based on a report in Eenadu, October 29, 1992.

ಮಹಿಳೆಯರ ಆಕ್ರೋಶಕ್ಕೆ ತುತ್ತಾಗಿ ಸಾರಾಯಿ ಮಾಫಿಯಾ ಕಾಲು ಕಿತ್ತಿತು

ಚಿತ್ತೂರು ಜಿಲ್ಲೆಯ ಕಲಿಕಾರಿ ಹೋಬಳಿಯ ಗುಂಡೂರು ಗ್ರಾಮದ ಮಹಿಳೆಯರೆಲ್ಲ ಸೇರಿ ತಮ್ಮ ಹಳ್ಳಿಯಲ್ಲಿನ ಸಾರಾಯಿ ಮಾರಾಟವನ್ನು ನಿಲ್ಲಿಸಲು ನಿರ್ಧರಿಸಿ, ತಮ್ಮ ನಿರ್ಧಾರವನ್ನು ಗ್ರಾಮದ ಸಾರಾಯಿ ಮಾರಾಟಗಾರನಿಗೆ ತಿಳಿಸಿದರು. ಗ್ರಾಮಕ್ಕೆ ಸಾರಾಯಿ ಪೊಟ್ಟಣಗಳನ್ನು ತರುತ್ತಿದ್ದ ಜೀಪನ್ನು ತಡೆದು ಅದು ಮರಳಿ ಹೋಗುವಂತೆ ಮಾಡಿದರು. ಆದರೆ, ಗ್ರಾಮದ ಸಾರಾಯಿ ಮಾರಾಟಗಾರನು ಈ ವಿಷಯವನ್ನು ಗುತ್ತಿಗೆದಾರನಿಗೆ ತಿಳಿಸಿದನು. ಅವನು ಮಾರಾಟಗಾರನು ಮರಳಿ ಮಾರಾಟವನ್ನು ಆರಂಭಿಸಲು ಸಹಾಯ ಮಾಡಲು ಜನರ ತಂಡವನ್ನು ಕಳಿಸಿದನು. ಗ್ರಾಮದ ಮಹಿಳೆಯರು ವಿಚಲಿತರಾಗದೆ ಇದನ್ನು ವಿರೋಧಿಸಿದರು. ಗುತ್ತಿಗೆದಾರನು ಪೋಲೀಸರನ್ನು ಕರೆಸಿದರೂ ಅವರೂ ಸಹ ಹಿಮ್ಮೆಟ್ಟುವಂತಾಯಿತು. ಒಂದು ವಾರದ ನಂತರ ಸಾರಾಯಿ ಮಾರಾಟದ ವಿರುದ್ಧ ಪ್ರತಿಭಟಿಸಿದ ಮಹಿಳೆಯರ ಮೇಲೆ ಸಾರಾಯಿ ಗುತ್ತಿಗೆದಾರನ ಗೂಂಡಾಗಳು ಕಬ್ಬಿಣದ ಸರಳುಗಳು ಮತ್ತು ಇತರ ಮಾರಕ ಅಸ್ತ್ರಗಳಿಂದ ಹಲ್ಲೆ ಮಾಡಿದರು. ಆದರೆ ಮಹಿಳೆಯರೆಲ್ಲ ಒಗ್ಗಟ್ಟಿನಿಂದ ದಾಳಿಯನ್ನು ಎದುರಿಸಿ ನಿಂತಾಗ ಬಾಡಿಗೆ ಮಾಫಿಯಾದವರು ಅಲ್ಲಿಂದ ಕಂಬಿ ಕೀಳುವಂತಾಯಿತು. ನಂತರ ಮಹಿಳೆಯರು ಸಾರಾಯಿಯಿಂದ ತುಂಬಿದ್ದ ಮೂರು ಜೀಪುಗಳನ್ನು ನಾಶಗೊಳಿಸಿದರು.

ಈನಾಡು ವರದಿಯೊಂದನ್ನು ಆಧರಿಸಿ, ಅಕ್ಟೋಬರ್ 29, 1992




ಈ ರೀತಿಯ ಕತೆಗಳು 1992ರ ಸೆಪ್ಟೆಂಬರ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ ತೆಲುಗು ವಾರ್ತಾಪತ್ರಿಕೆಗಳಲ್ಲಿ ನಿತ್ಯವೂ ಕಾಣಿಸಿಕೊಳ್ಳುತ್ತಿದ್ದವು. ಪ್ರತೀ ಕತೆಯಲ್ಲಿಯೂ ಹಳ್ಳಿಯ ಹೆಸರೊಂದು ಬದಲಾಗುತ್ತಿತ್ತು, ಆದರೆ ಕತೆ ಅದೇ ಆಗಿರುತ್ತಿತ್ತು. ಈ ಅವಧಿಯಲ್ಲಿ ಆಂಧ್ರಪ್ರದೇಶದ ಕುಗ್ರಾಮದ ಗ್ರಾಮೀಣ ಮಹಿಳೆಯರು ಕುಡಿತ, ಅದಕ್ಕೆ ಸಂಬಂಧಿಸಿದ ಮಾಫಿಯಾ ಮತ್ತು ಸರಕಾರದ ವಿರುದ್ಧ ಹೋರಾಡಿದರು. ಈ ಪ್ರತಿಭಟನೆಗಳೇ ರಾಜ್ಯದಲ್ಲಿ ಸಾರಾಯಿ ನಿಷೇಧದ ಚಳುವಳಿಗಳ ರೂಪ ತಾಳಿದವು.




ನಾವು ಈ ಎಲ್ಲ ಒಳ್ಳೆಯ ಕತೆಗಳನ್ನು ಕೇಳುತ್ತೇವೆ. ಆದರೆ ಅವು ಹೇಗೆ ಕೊನೆಗೊಂಡವು ಎನ್ನುವುದನ್ನು ಅವರು ಯಾವತ್ತೂ ಹೇಳುವುದಿಲ್ಲ. ಈ ಚಳುವಳಿಯು ಕುಡಿತವನ್ನು ಕೊನೆಗೊಳಿಸಲು ಸಾಧ್ಯವಾಯಿತೆ? ಅಥವಾ ಸ್ವಲ್ಪ ದಿನಗಳ ನಂತರ ಗಂಡಸರು ಯಥಾಪ್ರಕಾರ ಕುಡಿಯಲು ಶುರು ಮಾಡಿದರೆ?

**ಚಳುವಳಿಯ ಉಗಮ**

1990ರ ಆರಂಭದಲ್ಲಿ ಆಂಧ್ರಪ್ರದೇಶದ ನೆಲ್ಲೂರು ಜಿಲ್ಲೆಯ ದುಬಗುಂಟ ಗ್ರಾಮದ ಒಳನಾಡಿನಲ್ಲಿ ಮಹಿಳೆಯರುರೆಲ್ಲ ವಯಸ್ಕ ಶಿಕ್ಷಣ ಅಭಿಯಾನಕ್ಕೆ ದೊಡ್ಡ ಪ್ರಮಣದಲ್ಲಿ ತಮ್ಮ ಹೆಸರನ್ನು ನೋಂದಾಯಿಸಿದ್ದರು. ತರಗತಿಯ ಚರ್ಚೆಯಲ್ಲಿ ಮಹಿಳೆಯರು ತಮ್ಮ ಕುಟುಂಬಗಳ ಗಂಡಸರು ಸ್ಥಳೀಯವಾಗಿ ಭಟ್ಟಿ ಇಳಿಸಿದ ಹೆಂಡವನ್ನು ಕುಡಿಯುವುದು ಹೆಚ್ಚುತ್ತಲೇ ಇರುವ ಬಗ್ಗೆ ದೂರಿದರು. ಗ್ರಾಮದ ಜನರಲ್ಲಿ ಕುಡಿತದ ಚಟವು ಆಳವಾಗಿ ಬೇರುಬಿಟ್ಟಿದ್ದು, ಅವರ ದೈಹಿಕ ಮತ್ತು ಮಾನಸಿಕ ಆರೋಗ್ಯವನ್ನು ಅದು ಹಾಳುಮಾಡುತ್ತಿತ್ತಲ್ಲದೆ, ಆ ಪ್ರದೇಶದ ಆರ್ಥಿಕ ಪರಿಸ್ಥಿತಿಯ ಮೇಲೆ ಗಾಢವಾದ ಪರಿಣಾಮ ಬೀರಿತ್ತು. ಸಾರಾಯಿಯ ಸೇವನೆಯು ಹೆಚ್ಚಾದ ಕಾರಣ, ಸಾಲವೂ ಏರತೊಡಗಿತ್ತು. ಗಂಡಸರು ತಮ್ಮ ಕೆಲಸಗಳಿಗೆ ಗೈರುಹಾಜರಾಗುತ್ತಿದ್ದು, ಗುತ್ತಿಗೆದಾರರು ಸಾರಾಯಿ ಮಾರಾಟದ ಮೇಲೆ ತಮ್ಮ ಏಕಸ್ವಾಮ್ಯವನ್ನು ಸಾಧಿಸಲು ದುಷ್ಕೃತ್ಯಗಳಲ್ಲಿ ತೊಡಗುತ್ತಿದ್ದರು. ಇದರ ಪರಿಣಾಮದಿಂದಾಗಿ, ಕುಟುಂಬದ ಆರ್ಥಿಕ ಪರಿಸ್ಥಿತಿ ಕುಸಿಯುತ್ತಿದ್ದ ಕಾರಣ, ಸಾರಾಯಿಯ ಈ ದುಷ್ಪರಿಣಾಮಗಳು ಮಹಿಳೆಯರ ಸಂಕಷ್ಟವನ್ನು ಹೆಚ್ಚಿಸಿದವಲ್ಲದೆ, ಮಹಿಳೆಯರು ಮನೆಯ ಗಂಡಸರಿಂದ, ವಿಶೇಷವಾಗಿ, ತಮ್ಮ ಗಂಡಂದಿರಿಂದ ಹಿಂಸೆಗೊಳಗಾಗುತ್ತಿದ್ದರು.

ಸಾರಾಯಿ ಮಾರಾಟವನ್ನು ವಿರೋಧಿಸುವ ಮತ್ತು ಮದ್ಯದ ಅಂಗಡಿಯನ್ನು ಬಲವಂತವಾಗಿ ಮುಚ್ಚಿಸುವ ನಿಟ್ಟಿನ ಸ್ವಯಂಸ್ಫೂರ್ತಿಯ ಸ್ಥಳೀಯ ಉಪಕ್ರಮಗಳಲ್ಲಿ ನೆಲ್ಲೂರಿನ ಮಹಿಳೆಯರು ಒಟ್ಟಾಗಿ ಸೇರಿದರು, ಈ ಸುದ್ದಿಯು ಬಹುಬೇಗನೇ ಎಲ್ಲೆಡೆ ಹರಡಿತು. ಸುಮಾರು 5000 ಹಳ್ಳಿಗಳ ಮಹಿಳೆಯರು ಇದರಿಂದ ಪ್ರೇರಿತರಾಗಿ ಸಭೆಗಳಲ್ಲಿ ಒಟ್ಟುಗೂಡಿ, ಸಾರಾಯಿ ನಿಷೇಧದ ಸಲುವಾಗಿ ಠರಾವು ಹೊರಡಿಸಿದರು ಮತ್ತು ತಮ್ಮ ನಿರ್ಧಾರಗಳನ್ನು ಜಿಲ್ಲಾಧಿಕಾರಿಗೆ ಕಳುಹಿಸಿದರು. ನೆಲ್ಲೂರಿನ ಸಾರಾಯಿ ಹರಾಜು ಪ್ರಕ್ರಿಯೆಗಳು 17 ಬಾರಿ ಮುಂದೂಡಲ್ಪಟ್ಟವು. ನೆಲ್ಲೂರಿನ ಈ ಚಳುವಳಿಯು ನಿಧಾನವಾಗಿ ರಾಜ್ಯದೆಲ್ಲೆಡೆ ಹರಡಿತು.

Credit: The Hindu



1992ರಲ್ಲಿ ಹೈದರಾಬಾದಿನಲ್ಲಿ ಮಹಿಳೆಯರು ಸಾರಾಯಿ ಮಾರಾಟದ ವಿರುದ್ಧ ಪ್ರತಿಭಟನಾ ಮೆರವಣಿಗೆ ನಡೆಸುತ್ತಿರುವುದು.
ಕೃಪೆ: ದಿ ಹಿಂದೂ

**ಸಂಪರ್ಕ ಕೊಂಡಿಗಳು**

ಸಾರಾಯಿ ಮಾರಾಟವನ್ನು ನಿಷೇಧಿಸಿ ಎಂಬ ಸಾರಾಯಿ ನಿಷೇಧ ಚಳುವಳಿಯ ಘೋಷಣೆಯು ಸರಳವಾಗಿತ್ತು. ಆದರೆ ಈ ಸರಳ ಬೇಡಿಕೆಯು ಆ ಪ್ರದೇಶದ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಇನ್ನೂ ದೊಡ್ಡ ವ್ಯಾಪ್ತಿಯ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಮಸ್ಯೆಗಳನ್ನು ಸ್ವಲ್ಪಮಟ್ಟಿಗೆ ಚರ್ಚಿಸುವಂತೆ ಮಾಡಿತು. ಸಾರಾಯಿ ಉದ್ಯಮದ ಸುತ್ತ ಅಪರಾಧ ಮತ್ತು ರಾಜಕೀಯದ ನಡುವೆ ನಿಕಟ ಸಂಬಂಧವು ಸ್ಥಾಪಿತಗೊಂಡಿತ್ತು. ರಾಜ್ಯ ಸರಕಾರವು ಸಾರಾಯಿ ಮಾರಾಟದ ಮೇಲೆ ಹೇರಿದ ತೆರಿಗೆಯ ಮೂಲಕ ಬೃಹತ್ ಪ್ರಮಾಣದ ಆದಾಯವನ್ನು ಸಂಗ್ರಹಿಸುತ್ತಿತ್ತು. ಹೀಗಾಗಿ ಸಾರಾಯಿ ಮಾರಾಟದ ಮೇಲೆ ನಿಷೇಧವನ್ನು ಹೇರಲು ಅದು ತಯಾರಿರಲಿಲ್ಲ. ಸ್ಥಳೀಯ ಮಹಿಳೆಯರ ಗುಂಪುಗಳು ಸಾರಾಯಿಯನ್ನು ವಿರೋಧಿಸುವ ತಮ್ಮ ಆಂದೋಲನದಲ್ಲಿ ಈ ರೀತಿಯ ಸಂಕೀರ್ಣ ವಿಷಯಗಳನ್ನು ಚರ್ಚಿಸಲು ಯತ್ನಿಸಿದರು. ಮನೆಯೊಳಗಿನ ಹಿಂಸೆಯ ವಿಷಯವನ್ನೂ ಅವರು ಬಹಿರಂಗವಾಗಿ ಚರ್ಚಿಸಿದರು. ಅವರ ಚಳುವಳಿಯು ಅದೇ ಮೊದಲ ಬಾರಿಗೆ ಮಹಿಳೆಯರು ಮನೆಯೊಳಗಿನ ಹಿಂಸೆಯಂತಹ ತಮ್ಮ ವೈಯಕ್ತಿಕ ಸಮಸ್ಯೆಗಳನ್ನು ಮುಕ್ತವಾಗಿ ಚರ್ಚಿಸಲು ವೇದಿಕೆಯೊಂದನ್ನು ಒದಗಿಸಿತು. ಹೀಗೆ ಸಾರಾಯಿ ನಿಷೇಧದ ಚಳುವಳಿಯು ಮಹಿಳಾ ಚಳುವಳಿಯ ಒಂದು ಭಾಗವೂ ಆಯಿತು.

ಮೊದಲಾದರೆ ಕೌಟುಂಬಿಕ ಹಿಂಸೆ, ವರದಕ್ಷಿಣೆಯ ಸಂಪ್ರದಾಯ, ಉದ್ಯೋಗ ಮತ್ತು ಸಾರ್ವಜನಿಕ ಸ್ಥಳಗಳಲ್ಲಿನ ಲೈಂಗಿಕ ದೌರ್ಜನ್ಯ ಮುಂತಾದ ಸಮಸ್ಯೆಗಳನ್ನು ಕುರಿತು ಕೆಲಸ ಮಾಡುತ್ತಿದ್ದ ಮಹಿಳಾ ಗುಂಪುಗಳು ದೇಶದ ವಿವಿಧೆಡೆಗಳಲ್ಲಿ ಮುಖ್ಯವಾಗಿ ನಗರ ಪ್ರದೇಶದ ಮಧ್ಯಮ ವರ್ಗದ ಮಹಿಳೆಯರ ನಡುವೆ ಸಕ್ರಿಯವಾಗಿರುತ್ತಿದ್ದವು. ಇದನ್ನು ಕುರಿತ ಅವರ ಕೆಲಸವು ಮಹಿಳೆಯರ ನಿಟ್ಟಿನ ಅನ್ಯಾಯ ಮತ್ತು ಲಿಂಗ ಅಸಮಾನತೆಯಂತಹ ಸಮಸ್ಯೆಗಳ ಸ್ವರೂಪವು ಸಂಕೀರ್ಣವಾಗಿದೆ ಎಂಬುದನ್ನು ಅವರಿಗೆ ಮನದಟ್ಟು ಮಾಡಿತು. ಎಂಬತ್ತರ ದಶಕದಲ್ಲಿ ಮಹಿಳಾ ಚಳುವಳಿಯು ಕುಟುಂಬದೊಳಗೆ ಮತ್ತು ಹೊರಗೆ ಮಹಿಳೆಯರ ಮೇಲಾಗುವ ಲೈಂಗಿಕ ದೌರ್ಜನ್ಯದ ಮೇಲೆ ತಮ್ಮ ಗಮನವನ್ನು ಕೇಂದ್ರೀಕರಿಸಿತು. ಈ ಗುಂಪುಗಳು ವರದಕ್ಷಿಣೆ ಪದ್ಧತಿಯ ವಿರುದ್ಧ ಆಂದೋಲನ ನಡೆಸಿದವು ಹಾಗೂ ಲಿಂಗ ಸಮಾನತೆಯ ತತ್ವವನ್ನು ಆಧರಿಸಿ ವೈಯಕ್ತಿಕ ಮತ್ತು ಆಸ್ತಿ ಹಕ್ಕುಗಳ ಕಾನೂನಿಗೆ ಒತ್ತಾಯಿಸಿದವು.

ಈ ಆಂದೋಲನಗಳು ಮಹಿಳೆಯರ ಸಮಸ್ಯೆಗಳನ್ನು ಕುರಿತ ಸಮಗ್ರ ಸಾಮಾಜಿಕ ಅರಿವನ್ನು ಹೆಚ್ಚಿಸುವಲ್ಲಿ ಅಪಾರ ಕೊಡುಗೆಯನ್ನಿತ್ತವು. ಮಹಿಳಾ ಚಳುವಳಿಗಳ ಗಮನವು ನಿಧಾನವಾಗಿ ಕಾನೂನಿನ ಸುಧಾರಣೆಗಳಿಂದ ನಾವು ಮೇಲೆ ಚರ್ಚಿಸಿದಂತಹ ಸಾಮಾಜಿಕ ಸಂಘರ್ಷಗಳ ಮೇಲೆ ಹರಿಯಿತು. ಅದರ ಪರಿಣಾಮವಾಗಿ ತೊಂಬತ್ತರ ದಶಕದಲ್ಲಿ, ರಾಜಕೀಯದಲ್ಲಿ ಮಹಿಳೆಯರಿಗೆ ಸಮಾನ ಪ್ರಾತಿನಿಧ್ಯ ದೊರೆಯಬೇಕೆಂಬ ಬೇಡಿಕೆಯನ್ನು ಈ ಮಹಿಳಾ ಚಳುವಳಿಗಳು ಮುಂದಿಟ್ಟವು. ಹಾಗಾಗಿ 73 ಮತ್ತು 74ನೇ ತಿದ್ದುಪಡಿಗಳು ಸ್ಥಳೀಯ ಮಟ್ಟದ ರಾಜಕೀಯ ಅಧಿಕಾರದಲ್ಲಿ ಮಹಿಳೆಯರಿಗೆ ಮೀಸಲಾತಿಗಳನ್ನು ನೀಡಿವೆ. ಅದೇ ರೀತಿಯ ಮೀಸಲಾತಿಯನ್ನು ರಾಜ್ಯ ಮತ್ತು ಕೇಂದ್ರದ ಶಾಸಕಾಂಗಕ್ಕೂ ವಿಸ್ತರಿಸಬೇಕೆನ್ನುವ ಬೇಡಿಕೆಗಳೂ ಬಂದವು. ಇದರ ಸಲುವಾಗಿ ಒಂದು ಸಾಂವಿಧಾನಿಕ ತಿದ್ದುಪಡಿ ಮಸೂದೆಯನ್ನು ಪ್ರಸ್ತಾಪಿಸಿದ್ದಾಗ್ಯೂ, ಸಂಸತ್ತಿನಲ್ಲಿ ಅದಕ್ಕೆ ಇನ್ನೂ ಸಾಕಷ್ಟು ಬೆಂಬಲ ದೊರೆತಿಲ್ಲ. ಇದಕ್ಕೆ ಮಹಿಳಾ ಗುಂಪುಗಳನ್ನೂ ಒಳಗೊಂಡಂತೆ ಪ್ರಮುಖ ವಿರೋಧಗಳು ವ್ಯಕ್ತವಾಗಿವೆ, ಅವು ರಾಜಕೀಯ ಅಧಿಕಾರ ಸ್ಥಾನಗಳಲ್ಲಿನ ಪ್ರಸ್ತಾವಿತ ಮಹಿಳಾ ಮೀಸಲಾತಿಯಲ್ಲಿ ದಲಿತ ಮತ್ತು ಇತರ ಹಿಂದುಳಿದ ಜಾತಿಗಳ (ಒಬಿಸಿ) ಮಹಿಳೆಯರಿಗೆಂದು ಪ್ರತ್ಯೇಕ ಮೀಸಲಾತಿಯನ್ನು ಒತ್ತಾಯಿಸುತ್ತಿವೆ.




ಚಲನಚಿತ್ರವೊಂದನ್ನು ನೋಡೋಣ

ಆಕ್ರೋಶ್

ಭಿಕು ಲಹನ್ಯ ಎಂಬ ಆದಿವಾಸಿಯೊಬ್ಬನ ಮೇಲೆ ಅವನ ಹೆಂಡತಿಯನ್ನು ಕೊಂದ ಆಪಾದನೆಯನ್ನು ಹೊರಿಸಲಾಗಿತ್ತು. ಭಿಕು ಲಹನ್ಯನ ಪರವಾಗಿ ವಾದಿಸಲು ವಕೀಲ ಭಾಸ್ಕರ್ ಕುಲಕರ್ಣಿಯನ್ನು ನೇಮಿಸಲಾಗಿತ್ತು. ವಕೀಲನು ಈ ಕೊಲೆಯ ಕಾರಣವನ್ನು ಕಂಡುಹಿಡಿಯಲು ಬಹುವಾಗಿ ಪ್ರಯತ್ನಿಸುತ್ತಾನಾದರೂ ಆಪಾದಿತ ಮತ್ತವನ ಕುಟುಂಬವು ದೃಢಸಂಕಲ್ಪದಿಂದ ಆ ಕುರಿತು ಏನನ್ನೂ ಹೇಳುವುದಿಲ್ಲ. ವಕೀಲನೂ ತನ್ನ ಪ್ರಯತ್ನವನ್ನು ಕೈಬಿಡುವುದಿಲ್ಲ. ಹೀಗಾಗಿ ವಕೀಲನ ಮೇಲೆ ಹಲ್ಲೆಯ ಪ್ರಯತ್ನಗಳಾಗುತ್ತವೆ, ಆದರೂ ಸಾಮಾಜಿಕ ಕಾರ್ಯಕರ್ತನೊಬ್ಬನಿಂದ ನಿಜವಾಗಿ ನಡೆದದ್ದೇನು ಎನ್ನುವುದರ ಸುಳಿವು ದೊರೆಯುತ್ತದೆ.

ಆದರೆ ಸಾಮಾಜಿಕ ಕಾರ್ಯಕರ್ತ ನಾಪತ್ತೆಯಾಗುತ್ತಾನೆ ಮತ್ತು ಭಿಕುವಿನ ತಂದೆ ಸಾಯುತ್ತಾನೆ. ತನ್ನ ತಂದೆಯ ಅಂತ್ಯಕ್ರಿಯೆಯಲ್ಲಿ ಭಾಗಿಯಾಗಲು ಭಿಕುವಿಗೆ ಅನುಮತಿ ದೊರೆಯುತ್ತದೆ. ಈ ಸಂದರ್ಭದಲ್ಲಿ ಭಿಕು ಭಾವೋದ್ವೇಗಕ್ಕೆ ಒಳಗಾಗಿ ಚೀರುತ್ತಾನೆ, ಆಕ್ರೋಶವು ಭುಗಿಲೇಳುತ್ತದೆ. ವಾಸ್ತವವನ್ನು ನಿಷ್ಠುರವಾಗಿ ನೋಡುವ ಈ ಚಲನಚಿತ್ರವು ಶೋಷಿತರ ಅಮಾನವೀಯ ಬದುಕನ್ನು ಮತ್ತು ಪ್ರಬಲ ಸಾಮಾಜಿಕ ಶಕ್ತಿಗಳ ವಿರುದ್ಧದ ಯಾವುದೇ ಹೋರಾಟವೂ ಎಷ್ಟು ಪ್ರಯಾಸದಾಯಕವಾದದ್ದು ಎನ್ನುವುದನ್ನು ಚಿತ್ರಿಸುತ್ತದೆ.

ವರ್ಷ: 1980

ನಿರ್ದೇಶಕ: ಗೋವಿಂದ್ ನಿಹಲಾನಿ

ಕತೆ: ವಿಜಯ್ ತೆಂಡೂಲ್ಕರ್

ಚಿತ್ರಕತೆ: ಸತ್ಯದೇವ ದುಬೆ

ನಟರು: ನಾಸೀರುದ್ದೀನ್ ಶಾ, ಓಂಪುರಿ, ಸ್ಮಿತಾ ಪಾಟೀಲ್, ನಾನಾ ಪಾಟೇಕರ್, ಮಹೇಶ್ ಎಲ್ಕುಂಚ್ವರ್




ವರದಕ್ಷಿಣೆ-ವಿರೋಧ ಕಾನೂನಿನ ಪರವಾಗಿ ಮಹಿಳೆಯರ ಪ್ರದರ್ಶನ
ಕೃಪೆ: ಇಂಡಿಯಾ ಟುಡೆ

## ನರ್ಮದಾ ಬಚಾವೊ ಆಂದೋಲನ

ನಾವು ಇಲ್ಲಿಯವರೆಗೆ ಚರ್ಚಿಸಿದ ಸಾಮಾಜಿಕ ಚಳುವಳಿಗಳು ಭಾರತವು ಸ್ವಾತಂತ್ರ್ಯ ದೊರೆತ ಅವಧಿಯಲ್ಲಿ ಅಳವಡಿಸಿಕೊಂಡ ಆರ್ಥಿಕ ಅಭಿವೃದ್ಧಿಯ ಮಾದರಿಯನ್ನು ಕುರಿತ ಅನೇಕ ವಿಷಯಗಳನ್ನು ಮುಂದಿಟ್ಟಿವೆ. ಚಿಪ್ಕೋ ಚಳುವಳಿಯು ಪರಿಸರದ ಅಳಿವಿನ ವಿಷಯವನ್ನು ಮುನ್ನೆಲೆಗೆ ತಂದರೆ, ರೈತರು

ಕೃಷಿ ಕ್ಷೇತ್ರದ ನಿರ್ಲಕ್ಷ್ಯದ ಬಗೆಗೆ ದೂರಿದ್ದಾರೆ. ದಲಿತರ ಸಾಮಾಜಿಕ ಮತ್ತು ಭೌತಿಕ ಸ್ಥಿತಿಗಳು ಜನ ಹೋರಾಟಗಳಿಗೆ ದಾರಿ ಮಾಡಿಕೊಟ್ಟವು, ಹಾಗೆಯೇ ಸಾರಾಯಿ ವಿರೋಧಿ ಆಂದೋಲನವು ಅಭಿವೃದ್ಧಿ ಎಂದು ಯಾವುದನ್ನು ಪರಿಗಣಿಸಲಾಗಿತ್ತೋ ಅದರ ಪ್ರತಿಕೂಲ ಪರಿಣಾಮಗಳ ಬಗೆಗೆ ಎಚ್ಚರಿಸಿತು. ಈ ಎಲ್ಲಾ ಚಳುವಳಿಗಳಲ್ಲಿ ಅಂತರ್ಗತವಾಗಿದ್ದ ವಿಷಯವು ಬೃಹತ್ ಅಭಿವೃದ್ಧಿ ಯೋಜನೆಗಳಿಂದ ಉಂಟಾದ ಸ್ಥಳಾಂತರಗಳ ವಿರುದ್ಧದ ಚಳುವಳಿಗಳ ಮೂಲಕ ಬಹಿರಂಗವಾಗಿ ವ್ಯಕ್ತಗೊಂಡಿತು.

**ಸರ್ದಾರ್ ಸರೋವರ್ ಯೋಜನೆ**

ಎಂಬತ್ತರ ದಶಕದ ಆದಿ ಭಾಗದಲ್ಲಿ ಮಧ್ಯ ಭಾರತದ ನರ್ಮದಾ ಕಣಿವೆಯಲ್ಲಿ ಮಹತ್ವಾಕಾಂಕ್ಷೆಯ ಅಭಿವೃದ್ಧಿ ಯೋಜನೆಯೊಂದು ಪ್ರಾರಂಭವಾಯಿತು. ಈ ಯೋಜನೆಯು 30 ದೊಡ್ಡ ಅಣೆಕಟ್ಟುಗಳು, 135 ಮಧ್ಯಮ ಗಾತ್ರದ ಮತ್ತು ಸುಮಾರು 3000 ಸಣ್ಣ ಅಣೆಕಟ್ಟುಗಳ ನಿರ್ಮಿತಿಯನ್ನು ಒಳಗೊಂಡಿತ್ತು. ಇವು ಮಧ್ಯಪ್ರದೇಶ, ಗುಜರಾತ್ ಮತ್ತು ಮಹಾರಾಷ್ಟ್ರದ ವ್ಯಾಪ್ತಿಯಲ್ಲಿ ಹರಿಯುವ ನರ್ಮದಾ ನದಿ ಮತ್ತು ಅದರ ಉಪನದಿಗಳಿಗೆ ಅಡ್ಡಲಾಗಿ ನಿರ್ಮಿಸಬೇಕೆಂದಿದ್ದ ಯೋಜನೆಗಳು. ಈ ಯೋಜನೆಗಳಲ್ಲಿ ಎಲ್ಲಕ್ಕಿಂತ ಪ್ರಮುಖವಾದ ಮತ್ತು ಬೃಹತ್ ಗಾತ್ರದ ಬಹು-ಉದ್ದೇಶಿತ ಅಣೆಕಟ್ಟುಗಳೆಂದರೆ ಗುಜರಾತಿನ ಸರ್ದಾರ್ ಸರೋವರ್ ಯೋಜನೆ ಮತ್ತು ಮಧ್ಯಪ್ರದೇಶದ ನರ್ಮದಾ ಸಾಗರ್ ಯೋಜನೆ. ನರ್ಮದಾ ನದಿಯನ್ನು ಉಳಿಸುವ ನಿಟ್ಟಿನ ನರ್ಮದಾ ಬಚಾವ್ ಆಂದೋಲನವು ಈ ಅಣೆಕಟ್ಟುಗಳ ನಿರ್ಮಾಣವನ್ನು ವಿರೋಧಿಸಿ, ದೇಶದಲ್ಲಿನ ಅಭಿವೃದ್ಧಿ ಯೋಜನೆಗಳ ಸ್ವರೂಪವನ್ನು ಪ್ರಶ್ನಿಸಿತು.




ಸರ್ದಾರ್ ಸರೋವರ್ ಯೋಜನೆಯು ಒಂದು ಬಹು-ಉದ್ದೇಶಿತ ಬೃಹತ್ ಪ್ರಮಾಣದ ಅಣೆಕಟ್ಟೆನಿಸಿದ್ದು, ಕುಡಿಯುವ ನೀರಿನ ಸೌಕರ್ಯ, ನೀರಾವರಿ, ವಿದ್ಯುತ್ ಉತ್ಪಾದನೆ ಮತ್ತು ಹೆಚ್ಚಿನ ಪ್ರಮಾಣದ ಕೃಷಿ ಉತ್ಪಾದನೆಯ ದೃಷ್ಟಿಯಿಂದ ಅದು ಗುಜರಾತಿನ ಬಹು ಪಾಲು ಪ್ರದೇಶಗಳು ಮತ್ತು ಅದರ ಪಕ್ಕದಲ್ಲಿನ ಮೂರು ರಾಜ್ಯಗಳಿಗೆ ಲಾಭದಾಯಕವಾಗಿದೆ ಎಂದು ಅದರ ಪರವಾಗಿ ವಾದಿಸುವವರು

ಹೇಳುತ್ತಾರೆ. ಅದಕ್ಕೆ ಪೂರಕವಾಗಿ ಪ್ರವಾಹ ಮತ್ತು ಕ್ಷಾಮದ ಪರಿಣಾಮಕಾರಿ ಹತೋಟಿಯನ್ನು ಸಾಧಿಸುವಂತಹ ಇನ್ನೂ ಅನೇಕ ಪ್ರಯೋಜನಗಳು ಈ ಅಣೆಕಟ್ಟಿನ ಯಶಸ್ಸಿನಿಂದ ದೊರೆಯಲಿವೆ ಎನ್ನಲಾಗುತ್ತದೆ. ಅಣೆಕಟ್ಟಿನ ನಿರ್ಮಾಣದ ಪ್ರಕ್ರಿಯೆಯಲ್ಲಿ ಈ ರಾಜ್ಯಗಳ 245 ಹಳ್ಳಿಗಳು ಮುಳುಗಡೆಯಾಗಬಹುದೆಂದು ನಿರೀಕ್ಷಿಸಲಾಗಿತ್ತು. ಆ ಹಳ್ಳಿಗಳಿಂದ ಸುಮಾರು ಎರಡೂವರೆ ಲಕ್ಷ ಜನರ ಸ್ಥಳಾಂತರವಾಗಬೇಕಿತ್ತು. ಸ್ಥಳೀಯ ಕಾರ್ಯಕರ್ತರ ಗುಂಪುಗಳು ಮೊದಲು ಚರ್ಚೆಗೆ ಎತ್ತಿಕೊಂಡದ್ದು, ಯೋಜನೆಯಿಂದ ಸಂತ್ರಸ್ತರಾಗುವವರ ಸ್ಥಳಾಂತರ ಮತ್ತು ಸಮರ್ಪಕ ಪುನರ್‌ವಸತಿಯ ವಿಷಯಗಳನ್ನು. ಸುಮಾರು 1988-89ರ ಹೊತ್ತಿಗೆ ಈ ಸಮಸ್ಯೆಗಳೆಲ್ಲವು ಸ್ಥಳೀಯ ಸ್ವಯಂಸೇವಾ ಸಂಸ್ಥೆಗಳೆಲ್ಲದರ ಸಾಮೂಹಿಕ ಸಂಘಟನೆಯೆನಿಸಿದ ನರ್ಮದಾ ಬಚಾವ್ ಆಂದೋಲನದ ಲಾಂಛನದಡಿಯಲ್ಲಿ ಹರಳುಗಟ್ಟಿದವು.

**ಚರ್ಚೆಗಳು ಮತ್ತು ಹೋರಾಟ**




2002ರಲ್ಲಿ ನರ್ಮದಾ ಬಚಾವ್ ಆಂದೋಲನದ ನಾಯಕಿ ಮೇಧಾ ಪಾಟ್ಕರ್ ಮತ್ತು ಇತರ ಕಾರ್ಯಕರ್ತರು ಪ್ರತಿಭಟನೆಯ ಅಂಗವಾಗಿ ಜಲಸಮಾಧಿಯಲ್ಲಿ ಭಾಗಿಯಾಗಿರುವುದು (ಏರುತ್ತಿರುವ ನೀರಿನೊಳಗೆ ನಿಂತು ಪ್ರತಿಭಟನೆ).
ಕೃಪೆ: ನರ್ಮದಾ ಬಚಾವ್ ಆಂದೋಲನ

ನರ್ಮದಾ ಬಚಾವ್ ಆಂದೋಲನವು ಆರಂಭದಿಂದಲೂ ಸರ್ದಾರ್ ಸರೋವರ್ ಯೋಜನೆಯ ವಿರುದ್ಧದ ತನ್ನ ಪ್ರತಿಭಟನೆಯನ್ನು ಆಗ ಆರಂಭಗೊಂಡಿದ್ದ ಅಭಿವೃದ್ಧಿ ಯೋಜನೆಗಳ ಸ್ವರೂಪ, ದೇಶದಲ್ಲಿ ಅನುಸರಿಸಲಾಗುತ್ತಿದ್ದ ಅಭಿವೃದ್ಧಿ ಮಾದರಿಯ ಕಾರ್ಯಕ್ಷಮತೆ, ಮತ್ತು ಒಂದು ಪ್ರಜಾಪ್ರಭುತ್ವದಲ್ಲಿ ಸಾರ್ವಜನಿಕ ಹಿತಾಸಕ್ತಿ ಎಂಬುದು ಒಳಗೊಳ್ಳುವ ಅಂಶಗಳ ನಿಟ್ಟಿನಲ್ಲಿ ಮುಂದುವರೆಸಿತ್ತು. ದೇಶದಲ್ಲಿ ಈವರೆಗೆ ಸಂಪೂರ್ಣಗೊಂಡ ಪ್ರಮುಖ ಅಭಿವೃದ್ಧಿ ಯೋಜನೆಗಳನ್ನು; ಮಾಡಿದ ವೆಚ್ಚ ಹಾಗೂ ದೊರೆತ ಲಾಭದ ದೃಷ್ಟಿಯಿಂದ (cost-benefit) ವಿಶ್ಲೇಷಿಸಬೇಕು ಎಂದು ಅದು ಒತ್ತಾಯಿಸಿತು. ಅಭಿವೃದ್ಧಿ ಯೋಜನೆಗಳ ಇನ್ನೂ ಹೆಚ್ಚಿನ ವ್ಯಾಪ್ತಿಯ ಸಾಮಾಜಿಕ ವೆಚ್ಚಗಳನ್ನು ಅಂತಹ ವಿಶ್ಲೇಷಣೆಯಲ್ಲಿ ಲೆಕ್ಕ ಹಾಕಬೇಕು ಎಂದು ಅದು ವಾದಿಸಿತು. ಯೋಜನೆಯಿಂದ ಬಾಧಿತರಾದವರ (ಸಂತ್ರಸ್ತರಾದವರ) ಒತ್ತಾಯದ ಪುನರ್ವಸತಿ, ಅವರ ಜೀವನೋಪಾಯದ ಮೂಲಗಳು ಮತ್ತು ಸಂಸ್ಕೃತಿಗಳ ಗಂಭೀರ ಸ್ವರೂಪದ ಅಳಿವು ಮತ್ತು ಪರಿಸರ ಸಂಪನ್ಮೂಲಗಳ ನಾಶವನ್ನು ಈ ಸಾಮಾಜಿಕ ವೆಚ್ಚಗಳು ಒಳಗೊಂಡಿದ್ದವು.




ಭರ್ಜರಿಯಾಗಿರುವ ವಸತಿ ಸಂಕೀರ್ಣಗಳು ಮತ್ತು ನಗರಗಳು ಯಾವುದೇ ಅಭಿವೃದ್ಧಿ ಯೋಜನೆಗಳ ಸಲುವಾಗಿ ಕೆಡವಲ್ಪಟ್ಟಿದ್ದನ್ನು ನಾನು ಎಲ್ಲಿಯೂ ಕೇಳಿಲ್ಲ. ಯಾವಾಗಲೂ ಆದಿವಾಸಿಗಳು ಮತ್ತು ಬಡಜನರನ್ನು ಮಾತ್ರ ತಮ್ಮ ಮನೆಯನ್ನು ಬಿಟ್ಟು ತೆರಳುವಂತೆ ಹೇಳಲಾಗುತ್ತದೆ ಏಕೆ?

ಆರಂಭದಲ್ಲಿ ಈ ಚಳುವಳಿಯದು, ಈ ಯೋಜನೆಯಿಂದ ನೇರವಾಗಿ ಅಥವಾ ಪರೋಕ್ಷವಾಗಿ ಬಾಧಿತರಾದ ಎಲ್ಲರಿಗೂ ಸೂಕ್ತ ಹಾಗೂ ನ್ಯಾಯೋಚಿತ ಪುನರ್‌ವಸತಿ ಕಲ್ಪಿಸಬೇಕು ಎಂಬ ಬೇಡಿಕೆಯಾಗಿತ್ತು. ಈ ಬೃಹತ್ ಗಾತ್ರದ ಅಭಿವೃದ್ಧಿ ಯೋಜನೆಗಳಲ್ಲಿ ನಿರ್ಧಾರಗಳನ್ನು ಕೈಗೊಳ್ಳುವ ಪ್ರಕ್ರಿಯೆಗಳ ಸ್ವರೂಪವನ್ನು ಕೂಡಾ ಈ ಚಳುವಳಿಯು ಪ್ರಶ್ನಿಸಿತು. ಅಂತಹ ನಿರ್ಧಾರಗಳಲ್ಲಿ ಸ್ಥಳೀಯ ಸಮುದಾಯಗಳ ಅಭಿಪ್ರಾಯಕ್ಕೆ ಅವಕಾಶವಿರಬೇಕು ಮತ್ತು ನೀರು, ಭೂಮಿ, ಹಾಗೂ ಅರಣ್ಯಗಳಂತಹ ನೈಸರ್ಗಿಕ ಸಂಪನ್ಮೂಲಗಳ ಮೇಲೆ ಕೂಡಾ ಅವರಿಗೆ ಪರಿಣಾಮಕಾರಿ ನಿಯಂತ್ರಣವಿರಬೇಕೆಂದು ನರ್ಮದಾ ಬಚಾವ್ ಆಂದೋಲನವು ಒತ್ತಾಯಿಸಿತು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಏಕೆ ಕೆಲವೇ ಜನರು ಇತರರ ಲಾಭಕ್ಕಾಗಿ ತ್ಯಾಗ ಮಾಡಬೇಕು ಎಂದು ಸಹ ಅದು ಪ್ರಶ್ನಿಸಿತು. ಈ ಎಲ್ಲಾ ಪರಿಗಣನೆಗಳಿಂದಾಗಿ ನರ್ಮದಾ ಬಚಾವ್ ಆಂದೋಲನವು ತನ್ನ ಆರಂಭದ ಬೇಡಿಕೆಯಾದ ಪುನರ್ವಸತೀಕರಣದಿಂದ ಸರಿದು ಅಣೆಕಟ್ಟಿನ ನಿರ್ಮಾಣವನ್ನು ಸಂಪೂರ್ಣವಾಗಿ ವಿರೋಧಿಸಿತು.




ನರ್ಮದಾ ಬಚಾವ್ ಆಂದೋಲನದಿಂದ ಸಂಘಟಿಸಲ್ಪಟ್ಟ ದೋಣಿಗಳ ರ್ಯಾಲಿ

ಚಳುವಳಿಯ ವಾದಗಳು ಮತ್ತು ಪ್ರತಿಭಟನೆಗಳಿಗೆ ಆ ಯೋಜನೆಯಿಂದ ಪ್ರಯೋಜನ ಪಡೆಯುವ ರಾಜ್ಯಗಳಿಂದ, ಮುಖ್ಯವಾಗಿ ಗುಜರಾತಿನಲ್ಲಿ ತೀವ್ರ ವಿರೋಧ ವ್ಯಕ್ತವಾಯಿತು. ಅದೇ ಕಾಲಕ್ಕೆ ಪುನರ್ವಸತಿಯ ಹಕ್ಕನ್ನು ಈಗ ಸರಕಾರ ಮತ್ತು ನ್ಯಾಯವ್ಯವಸ್ಥೆ ಎರಡೂ ಮಾನ್ಯ ಮಾಡಿದವು. 2003ರಲ್ಲಿ ರಾಷ್ಟ್ರೀಯ ಪುನರ್ವಸತಿ ನೀತಿಯು ಸರಕಾರದಿಂದ ರೂಪಿಸಲ್ಪಟ್ಟಿದ್ದು, ಅದನ್ನು ನರ್ಮದಾ ಆಂದೋಲನದಂತಹ ಚಳುವಳಿಗಳಿಂದ ಆದ ಒಂದು ಸಾಧನೆ ಎನ್ನಬಹುದು. ಆದರೆ ಅಣೆಕಟ್ಟಿನ ನಿರ್ಮಾಣವನ್ನು ಸ್ಥಗಿತಗೊಳಿಸಬೇಕು ಎನ್ನುವ ಅದರ ಬೇಡಿಕೆಯನ್ನು ಅಭಿವೃದ್ಧಿಯ ಪ್ರಕ್ರಿಯೆಯನ್ನು ತಡೆಯುತ್ತದೆ, ಬಹಳ ಜನರಿಗೆ ಲಭ್ಯವಾಗಬಹುದಾದ ನೀರಿನ ಸೌಲಭ್ಯ ಮತ್ತು ಆರ್ಥಿಕ ಪ್ರಗತಿಗೆ ಅಡ್ಡಗಾಲು ಹಾಕುತ್ತದೆಯೆಂದು ತೀವ್ರವಾಗಿ ಟೀಕಿಸಲಾಗಿದೆ. ಸರಕಾರದ ನಿರ್ಧಾರವನ್ನು ಎತ್ತಿ ಹಿಡಿಯುತ್ತ ಸರ್ವೋಚ್ಚ ನ್ಯಾಯಾಲಯವು ಅಣೆಕಟ್ಟೆಯ ನಿರ್ಮಾಣವನ್ನು ಮುಂದುವರೆಸಿ,, ಸೂಕ್ತ ಪುನರ್ವಸತಿಯನ್ನು ಖಾತರಿಪಡಿಸಿಕೊಳ್ಳಬೇಕೆಂದು ಸೂಚಿಸಿದೆ.

ನರ್ಮದಾ ಬಚಾವ್ ಆಂದೋಲನವು ಪ್ರತಿಭಟನೆಯನ್ನು ಅವ್ಯಾಹತವಾಗಿ ಇಪ್ಪತ್ತು ವರ್ಷಗಳಿಗಿಂತ ಹೆಚ್ಚು ಕಾಲ ಮುಂದುವರೆಸಿತು. ತನ್ನ ಬೇಡಿಕೆಗಳನ್ನು ಮುಂದಿಡಲು ಅದು ಲಭ್ಯವಿದ್ದ ಎಲ್ಲಾ ಪ್ರಜಾತಾಂತ್ರಿಕ ವಿಧಾನಗಳನ್ನು ಬಳಸಿಕೊಂಡಿತು. ನ್ಯಾಯಾಲಯಕ್ಕೆ ಮೊರೆ ಹೋಗುವುದು, ಅಂತರರಾಷ್ಟ್ರೀಯ ಮಟ್ಟದಲ್ಲಿ ಬೆಂಬಲವನ್ನು ಸಂಘಟಿಸುವುದು, ಚಳುವಳಿಯ ಪರವಾಗಿ ಸಾರ್ವಜನಿಕ ಜಮಾವಣೆಗಳನ್ನು ಆಯೋಜಿಸುವುದು ಮತ್ತು ಚಳುವಳಿಯ ನಿಲುವನ್ನು ಜನತೆಗೆ ಮನದಟ್ಟು ಮಾಡಿಕೊಡಲು ಸತ್ಯಾಗ್ರಹದ ವಿವಿಧ ರೂಪಗಳನ್ನು ಪುನರುಜ್ಜೀವನಗೊಳಿಸುವ ಕ್ರಿಯೆಗಳನ್ನು ಇದು ಒಳಗೊಂಡಿತ್ತು ಆದರೆ ವಿರೋಧ ಪಕ್ಷಗಳನ್ನೂ ಒಳಗೊಂಡಂತೆ ಮುಖ್ಯವಾಹಿನಿಯ ರಾಜಕೀಯ ಪಕ್ಷಗಳಿಂದ ಹೆಚ್ಚಿನ ಬೆಂಬಲ ಪಡೆಯುವುದು ಅದಕ್ಕೆ ಸಾಧ್ಯವಾಗಲಿಲ್ಲ. ವಾಸ್ತವದಲ್ಲಿ ನರ್ಮದಾ ಬಚಾವ್ ಆಂದೋಲನವು ಭಾರತದ ರಾಜಕೀಯದಲ್ಲಿ ರಾಜಕೀಯ ಪಕ್ಷಗಳು ಮತ್ತು ಸಾಮಾಜಿಕ ಚಳುವಳಿಗಳ ಬೇರ್ಪಡಿಕೆಯ ಅನುಕ್ರಮ ಪ್ರಕ್ರಿಯೆಯನ್ನು ಬಿಂಬಿಸುತ್ತದೆ. ಆದಾಗ್ಯೂ, ತೊಂಭತ್ತರ ದಶಕದ ಕೊನೆಯಲ್ಲಿ ನರ್ಮದಾ ಬಚಾವ್ ಆಂದೋಲನವು ಏಕಾಂಗಿಯಾಗಿರಲಿಲ್ಲ. ತಮ್ಮ ಕ್ಷೇತ್ರಗಳ ಬೃಹತ್ ಗಾತ್ರದ ಅಭಿವೃದ್ಧಿ ಯೋಜನೆಗಳನ್ನು ವಿರೋಧಿಸುವ ಅನೇಕ ಸ್ಥಳೀಯ ಗುಂಪುಗಳು ಮತ್ತು ಚಳುವಳಿಗಳು ರೂಪುಗೊಂಡವು. ಈ ಹೊತ್ತಿಗೆ ನರ್ಮದಾ ಬಚಾವ್ ಆಂದೋಲನವು ದೇಶದ ವಿವಿಧ ಜಾಗಗಳಲ್ಲಿ ಇದೇ ರೀತಿಯ ವಿಷಯಗಳನ್ನು ಕುರಿತ ಹೋರಾಟಗಳನ್ನು ನಡೆಸುತ್ತಿದ್ದ ಜನಾಂದೋಲನದ ದೊಡ್ಡ ಮಟ್ಟದ ಸಂಘಟನೆಯ ಒಂದು ಭಾಗವಾಯಿತು.

**ಜನಾಂದೋಲನಗಳಿಂದ ದೊರೆತ ಪಾಠಗಳು**

ಈ ಜನಾಂದೋಲನಗಳ ಚರಿತ್ರೆಯು ನಾವು ಪ್ರಜಾಸತ್ತಾತ್ಮಕ ರಾಜಕೀಯದ ಸ್ವರೂಪವನ್ನು ಉತ್ತಮವಾಗಿ ಅರ್ಥ ಮಾಡಿಕೊಳ್ಳಲು ನೆರವಾಗುತ್ತದೆ. ಈ ಪಕ್ಷೇತರ (ಯಾವ ಪಕ್ಷಕ್ಕೂ ಸೇರದ) ಆಂದೋಲನಗಳು ವಿರಳವೂ ಅಲ್ಲ ಸಮಸ್ಯೆಯೂ ಅಲ್ಲ ಎನ್ನುವುದನ್ನು ನಾವು ನೋಡಿದ್ದೇವೆ. ಈ ಚಳುವಳಿಗಳು ಪಕ್ಷ ರಾಜಕಾರಣದ ಕಾರ್ಯಗಳಲ್ಲಿನ ಕೆಲವು ತಪ್ಪುಗಳನ್ನು ಸರಿಪಡಿಸುವ ನಿಟ್ಟಿನಲ್ಲಿ ರೂಪುಗೊಂಡಿದ್ದು, ಇವುಗಳನ್ನು ನಮ್ಮ ಪ್ರಜಾಪ್ರಭುತ್ವ ರಾಜಕಾರಣದ ಒಂದು ಅವಿಭಾಜ್ಯ ಅಂಗವೆಂದು ಪರಿಗಣಿಸಬೇಕಿದೆ. ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಚುನಾವಣಾ ರಾಜಕೀಯ ಕ್ಷೇತ್ರದಲ್ಲಿ

ಪರಿಹರಿಸಲು ಸಾಧ್ಯವಾಗದವರ ಹೊಸ ಸಾಮಾಜಿಕ ಸಮುದಾಯಗಳನ್ನು ಅವು ಪ್ರತಿನಿಧಿಸಿದವು. ಜನಾಂದೋಲನಗಳು ವೈವಿಧ್ಯಮಯ ಗುಂಪುಗಳು ಹಾಗೂ ಅವುಗಳ ಬೇಡಿಕೆಗಳ ಪರಿಣಾಮಕಾರಿ ಪ್ರತಿನಿಧಿಸುವಿಕೆಯನ್ನು ಖಾತರಿಪಡಿಸಿಕೊಂಡವು. ಈ ಗುಂಪುಗಳಲ್ಲಿ ಪ್ರಜಾಪ್ರಭುತ್ವದ ನಿಟ್ಟಿನ ಆಳವಾದ ಸಾಮಾಜಿಕ ಸಂಘರ್ಷಗಳು ಮತ್ತು ಅಸಮಾಧಾನದ ಸಂಭಾವ್ಯತೆಯನ್ನು ಇದು ಕಡಿಮೆಗೊಳಿಸಿತು. ಜನಾಂದೋಲನಗಳು ಹೊಸ ಬಗೆಯ ಸಕ್ರಿಯ ಪಾಲ್ಗೊಳ್ಳುವಿಕೆಯನ್ನು ಸೂಚಿಸಿದವಲ್ಲದೆ, ಈ ಪ್ರಕಾರವಾಗಿ ಭಾರತದ ಪ್ರಜಾಪ್ರಭುತ್ವದಲ್ಲಿ ಪಾಲ್ಗೊಳ್ಳುವಿಕೆಯ ಕಲ್ಪನೆಯನ್ನು ವಿಸ್ತರಿಸಿದವು.

ಮುಷ್ಕರ ನಡೆಸುವುದು, ಧರಣಿ ಕೂರುವುದು, ಜಮಾವಣೆಯಂತಹ ಸಾಮೂಹಿಕ ಕಾರ್ಯಗಳು ಸರಕಾರದ ಕಾರ್ಯಕ್ಕೆ ಅಡ್ಡಿ ತರುತ್ತವೆ, ನಿರ್ಧಾರ ಕೈಗೊಳ್ಳುವುದನ್ನು ನಿಧಾನಿಸುತ್ತವೆ ಮತ್ತು ಪ್ರಜಾಪ್ರಭುತ್ವದ ದಿನಚರಿಗಳಲ್ಲಿ ಅಸ್ಥಿರತೆಯನ್ನು ತರುತ್ತವೆ ಎಂದು ಈ ಚಳುವಳಿಗಳನ್ನು ಟೀಕಿಸುವವರು ಆಗಾಗ ವಾದಿಸುತ್ತಾರೆ. ಅಂತಹ ವಾದವು 'ಈ ಚಳುವಳಿಗಳು ಅಂತಹ ಹಠಸಾಧನೆಯ ಮಾರ್ಗಗಳನ್ನು ಏಕೆ ಆಶ್ರಯಿಸುತ್ತವೆ?' ಎಂಬ ಗಂಭೀರ ಪ್ರಶ್ನೆಗೆ ಆಹ್ವಾನವೀಯುತ್ತದೆ. ಜನಾಂದೋಲನಗಳು ಜನತೆಯ ನ್ಯಾಯಬದ್ಧ ಬೇಡಿಕೆಗಳನ್ನು ಮುಂದಿಟ್ಟಿವೆ ಮತ್ತು ದೊಡ್ಡ ಪ್ರಮಾಣದಲ್ಲಿ ನಾಗರಿಕರ ಪಾಲ್ಗೊಳ್ಳುವಿಕೆಯನ್ನು ಒಳಗೊಂಡಿವೆ ಎಂಬುದನ್ನು ನಾವು ಈ ಅಧ್ಯಾಯದಲ್ಲಿ ನೋಡಿದ್ದೇವೆ. ಈ ಚಳುವಳಿಗಳು ಸಂಘಟಿಸಿರುವ ಗುಂಪುಗಳು; ಬಡವರು, ಸಮಾಜದಲ್ಲಿ ಅಂಚಿಗೆ ತಳ್ಳಲ್ಪಟ್ಟ ಗುಂಪುಗಳಲ್ಲಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ವರ್ಗಗಳನ್ನು ಒಳಗೊಂಡಿವೆ ಎನ್ನುವುದನ್ನು ಇಲ್ಲಿ ಗಮನಿಸಬೇಕು. ಈ ಚಳುವಳಿಗಳು ಬಳಸಿದ ವಿಧಾನಗಳು ಮತ್ತು ಆವರ್ತನಗಳು ಪ್ರಜಾಪ್ರಭುತ್ವದ ದಿನನಿತ್ಯದ ಕಾರ್ಯವೈಖರಿಯಲ್ಲಿ ಈ ಸಾಮಾಜಿಕ ಗುಂಪುಗಳ ದನಿಗಳಿಗೆ ಸಾಕಷ್ಟು ಅವಕಾಶವಿರಲಿಲ್ಲವೆಂಬುದನ್ನು ಸೂಚಿಸುತ್ತವೆ. ಆದ್ದರಿಂದಲೇ ಬಹುಶಃ ಈ ಗುಂಪುಗಳು ಚುನಾವಣಾ ಕ್ಷೇತ್ರದ ಹೊರಗಿನ ಸಾಮೂಹಿಕ - ಕಾರ್ಯಗಳನ್ನು ಮತ್ತು ಸಂಘಟನೆಗಳನ್ನು ಆಶ್ರಯಿಸಿದವು ಎನಿಸುತ್ತದೆ.




ಚಳುವಳಿಗಳು ರಾಜಕೀಯದ ಪ್ರಯೋಗಾಲಯಗಳು ಎನ್ನಬಹುದೆ? ಇಲ್ಲಿ ಹೊಸ ಪ್ರಯೋಗಗಳನ್ನು ನಡೆಸಲಾಗುತ್ತದೆ ಮತ್ತು ಇದರಲ್ಲಿ ಯಶಸ್ವಿಯಾದ ಪ್ರಯೋಗಗಳನ್ನು ರಾಜಕೀಯ ಪಕ್ಷಗಳು ತಮ್ಮ ಕಾರ್ಯತಂತ್ರವನ್ನಾಗಿಸಿಕೊಳ್ಳುತ್ತವೆ.




ಜನಾಂದೋಲನಗಳು ಸಣ್ಣ ನಿಯತಕಾಲಿಕಗಳ ರೂಪದಲ್ಲಿ ವಿಸ್ತೃತ ವ್ಯಾಪ್ತಿಯ ಸಾಹಿತ್ಯವನ್ನು ರೂಪಿಸಿವೆ. ಅವುಗಳಲ್ಲಿ ಆಯ್ದ ಕೆಲವನ್ನು ಇಲ್ಲಿ ತೋರಿಸಲಾಗಿದೆ.

## ಮಾಹಿತಿ ಹಕ್ಕನ್ನು ಕುರಿತ ಚಳುವಳಿ




“MKSSನಿಂದ ರೂಪುಗೊಂಡ “ಘೋಟಾಲಾ ರಥ್‌ಯಾತ್ರಾ”, ಒಂದು ಜನಪ್ರಿಯ ನಾಟಕ ರೂಪ.

**ಕೃಪೆ: ಪಂಕಜ್ ಪುಷ್ಕರ್**

ತನ್ನ ಪ್ರಮುಖ ಬೇಡಿಕೆಗೆ ಸರಕಾರದಿಂದ ಒಪ್ಪಿಗೆ ಪಡೆಯಲು ಯಶಸ್ವಿಯಾದ ಚಳುವಳಿಗಳಲ್ಲಿ ಮಾಹಿತಿ ಹಕ್ಕಿನ ಚಳುವಳಿಯು (RTI) ಇತ್ತೀಚಿನ ಕೆಲವು ಉದಾಹರಣೆಗಳಲ್ಲಿ ಒಂದೆನಿಸಿದೆ.

ಈ ಚಳುವಳಿಯು 1990ರಲ್ಲಿ ರಾಜಸ್ಥಾನದಲ್ಲಿ ಮಜ್ದೂರ್ ಕಿಸಾನ್ ಶಕ್ತಿ ಸಂಘಟನ್ (MKSS) ಎಂಬ ಒಂದು ಶ್ರೀಸಾಮಾನ್ಯರನ್ನು ಆಧರಿಸಿದ ಸಂಘಟನೆಯು ಬರ ಪರಿಹಾರ ಕೆಲಸದ ದಾಖಲೆಗಳು ಮತ್ತು ಕಾರ್ಮಿಕರ ಹಣಕಾಸಿನ ಲೆಕ್ಕಪತ್ರಗಳಿಗೆ ಬೇಡಿಕೆಯನ್ನು ಸಲ್ಲಿಸುವ ಉಪಕ್ರಮವನ್ನು ಕೈಗೊಂಡಾಗ ಆರಂಭವಾಯಿತು. ಈ ಬೇಡಿಕೆಯನ್ನು ಮೊಟ್ಟಮೊದಲು ರಾಜಸ್ಥಾನದ ಅತೀ ಹಿಂದುಳಿದ ಪ್ರದೇಶವಾದ ಭೀಮ್ ತೆಹಸಿಲ್‌ನಲ್ಲಿ ಮಂಡಿಸಲಾಯಿತು. ಶಾಲೆಗಳ ಕಟ್ಟಡ ನಿರ್ಮಾಣದಲ್ಲಿ, ಔಷಧಾಲಯಗಳು, ಸಣ್ಣ ಅಣೆಕಟ್ಟುಗಳು, ಸಮುದಾಯ ಕೇಂದ್ರಗಳ ನಿರ್ಮಾಣ ಕಾರ್ಯದಲ್ಲಿ ಸಂಬಳ (ಕೂಲಿ) ಪಡೆದ ಕಾರ್ಮಿಕರ ಹಾಜರಿ ಪಟ್ಟಿಯಲ್ಲಿ ಇರುವ ಜನರ ಹೆಸರುಗಳು, ಅಲ್ಲಿ ಕೊಟ್ಟ ಬಿಲ್ಲುಗಳು ಮತ್ತು

ರಸೀತಿಗಳ ಪ್ರತಿಗಳನ್ನು ಕೇಳುವ ಮೂಲಕ ಮಾಹಿತಿ ಪಡೆದುಕೊಳ್ಳುವ ಹಕ್ಕು ತಮಗಿದೆಯೆಂದು ಗ್ರಾಮೀಣರು ಪ್ರತಿಪಾದಿಸಿದರು. ಕಾಗದಪತ್ರಗಳಲ್ಲಿ ಅಂತಹ ಅಭಿವೃದ್ಧಿ ಯೋಜನೆಗಳೆಲ್ಲವೂ ಪೂರ್ಣಗೊಂಡಿದ್ದವು, ಆದರೆ ಹಣಕಾಸಿನ ವಿಷಯದಲ್ಲಿ ಒಟ್ಟಾರೆ ಅವ್ಯವಹಾರ ನಡೆದಿದೆ ಎನ್ನುವುದಂತೂ ಗ್ರಾಮಸ್ಥರಿಗೆ ಅರ್ಥವಾಗಿತ್ತು. 1994 ಮತ್ತು 1996ರಲ್ಲಿ MKSS 'ಜನ ಸುನವಾಯಿ'ಗಳನ್ನು ಅಥವಾ ಸಾರ್ವಜನಿಕ ವಿಚಾರಣೆಗಳನ್ನು ಸಂಘಟಿಸಿತು. ಅಲ್ಲಿ ತನ್ನ ನಿಲುವನ್ನು ಸಾರ್ವಜನಿಕವಾಗಿ ವಿವರಿಸುವಂತೆ ಆಡಳಿತಾಂಗವನ್ನು ಕೇಳಲಾಗುತ್ತಿತ್ತು.

ರಾಜಸ್ಥಾನದ ಪಂಚಾಯತ್ ರಾಜ್ ಕಾಯಿದೆಯಲ್ಲಿ ಸಾರ್ವಜನಿಕರಿಗೆ ಪಂಚಾಯತಿಗಳಲ್ಲಿರುವ ದಾಖಲೆಗಳ ಅಧಿಕೃತ ಪ್ರತಿಗಳನ್ನು ಪಡೆಯಲು ಅನುಮತಿ ಸಿಗುವಂತೆ ಅವರು ಒಂದು ತಿದ್ದುಪಡಿಯನ್ನು ಮಾಡಿಸುವ ಮೂಲಕ ಚಳುವಳಿಯು ಸಣ್ಣ ಯಶಸ್ಸನ್ನು ಕಂಡಿತು. ಪಂಚಾಯತಿಗಳು ಕೂಡಾ ತಮ್ಮ ಬಜೆಟ್, ಲೆಕ್ಕಪತ್ರಗಳು, ಆಯವ್ಯಯ, ನೀತಿಗಳು ಮತ್ತು ಫಲಾನುಭವಿಗಳನ್ನು ಕುರಿತ ದಾಖಲೆಗಳನ್ನು ಕಛೇರಿಯ ಪ್ರಕಟಣ ಫಲಕದ ಮೇಲೆ ಮತ್ತು ವೃತ್ತಪತ್ರಿಕೆಗಳಲ್ಲಿ ಪ್ರಕಟಿಸಬೇಕಿತ್ತು. 1996ರಲ್ಲಿ RTI ಅನ್ನು ಒಂದು ರಾಷ್ಟ್ರೀಯ ಆಂದೋಲನವನ್ನಾಗಿ ಮಾಡಲು MKSS ಜನರ ಮಾಹಿತಿ ಹಕ್ಕುಗಳ ಸಲುವಾಗಿ ದಿಲ್ಲಿಯಲ್ಲಿ ಒಂದು ರಾಷ್ಟ್ರೀಯ ಸಮಿತಿಯನ್ನು ರೂಪಿಸಿತು. ಅದಕ್ಕಿಂತ ಮೊದಲು ಗ್ರಾಹಕರ ಶಿಕ್ಷಣ ಮತ್ತು ಸಂಶೋಧನಾ ಕೇಂದ್ರ, ಪ್ರೆಸ್ ಕೌನ್ಸಿಲ್ ಹಾಗೂ ಶೌರೀ ಸಮಿತಿಗಳು ಮಾಹಿತಿ ಹಕ್ಕಿನ ಒಂದು ಕರಡನ್ನು ಮಂಡಿಸಿದ್ದವು. 2002ರಲ್ಲಿ ಒಂದು ದುರ್ಬಲ ರೂಪದ ಮಾಹಿತಿ ಸ್ವಾತಂತ್ರ್ಯದ ಕಾಯಿದೆಯು ಸದನದಲ್ಲಿ ಮಂಜೂರಾಯಿತು, ಆದರೆ ಅದು ಎಂದೂ ಕಾರ್ಯರೂಪಕ್ಕೆ ಬರಲಿಲ್ಲ. 2004ರಲ್ಲಿ RTI ಮಸೂದೆಯನ್ನು ರಚಿಸಲ್ಪಟ್ಟು, 2005ರ ಜೂನ್ ತಿಂಗಳಲ್ಲಿ ಅದಕ್ಕೆ ರಾಷ್ಟ್ರಪತಿಗಳ ಅನುಮೋದನೆಯು ದೊರೆಯಿತು.



Credit: Sudhir Tailang/UNDP and Planning Commissi

ಕ್ಷಮಿಸಿ, ನಾವು ನಿಮ್ಮೊಂದಿಗೆ ಹಂಚಿಕೊಳ್ಳಬಹುದಾದ ಒಂದೇ ಒಂದು ಕಡತವೆಂದರೆ ಮಾಹಿತಿ ಹಕ್ಕಿನ ಕಾಯಿದೆಯದ್ದು!

ಕೃಪೆ: ಸುಧೀರ್ ತೇಲಂಗ್ -ಯೂಎನ್‌ಡಿಪಿ ಮತ್ತು ಪ್ಲಾನಿಂಗ್ ಕಮಿಶನ್

## ಮರು ಅನ್ವೇಷಣೆ

ಕಳೆದ 25 ವರ್ಷಗಳಲ್ಲಿ ನಿಮ್ಮ ನಗರ ಅಥವಾ ಜಿಲ್ಲೆಯಲ್ಲಿನ ಕನಿಷ್ಠ ಒಂದಾದರೂ ಜನಾಂದೋಲನವನ್ನು (ಸಾಮಾಜಿಕ ಚಳುವಳಿಯನ್ನು) ಗುರುತಿಸಿ. ಆ ಚಳುವಳಿಯ ಬಗ್ಗೆ ಕೆಳಕಂಡ ಮಾಹಿತಿಯನ್ನು ಸಂಗ್ರಹಿಸಿ.

ಅದು ಯಾವಾಗ ಆರಂಭವಾಯಿತು? ಎಷ್ಟು ದಿನ ನಡೆಯಿತು?

ಅದರ ಮುಖ್ಯ ನಾಯಕರು ಯಾರಾಗಿದ್ದರು? ಚಳುವಳಿಯನ್ನು ಬೆಂಬಲಿಸಿದ ಸಾಮಾಜಿಕ ಗುಂಪುಗಳು ಯಾವುವು?

ಚಳುವಳಿಯು ಮುಂದಿಟ್ಟ ಮುಖ್ಯ ಸಮಸ್ಯೆಗಳು ಅಥವಾ ಬೇಡಿಕೆಗಳು ಯಾವುವು?

ಅದು ಯಶಸ್ವಿಯಾಯಿತೆ? ನಿಮ್ಮ ಕ್ಷೇತ್ರದಲ್ಲಿ ಅದರ ದೀರ್ಘಾವಧಿ ಪರಿಣಾಮ ಏನಾಗಿತ್ತು?

ಇದನ್ನು ಇತ್ತೀಚಿನ ಹೊಸ ಆರ್ಥಿಕ ನೀತಿಗಳ ಸಂದರ್ಭದಲ್ಲಿ ನೋಡಬಹುದು. ಈ ನೀತಿಗಳನ್ನು ಅನುಷ್ಠಾನಕ್ಕೆ ತರುವ ನಿಟ್ಟಿನಲ್ಲಿ ಎಲ್ಲಾ ರಾಜಕೀಯ ಪಕ್ಷಗಳ ಒಮ್ಮತವೂ ವೃದ್ಧಿಸುತ್ತಿದೆ ಎನ್ನುವುದನ್ನು ನೀವು ಒಂಬತ್ತನೆಯ ಅಧ್ಯಾಯದಲ್ಲಿ ಓದಲಿದ್ದೀರಿ. ಅದರರ್ಥ, ಈ ನೀತಿಗಳಿಂದ ಪ್ರತಿಕೂಲ ಪರಿಣಾಮಗಳನ್ನು ಎದುರಿಸಬಹುದಾದ ಅಂಚಿನ ಸಾಮಾಜಿಕ ಗುಂಪುಗಳು, ರಾಜಕೀಯ ಪಕ್ಷಗಳು ಮತ್ತು ಮಾಧ್ಯಮಗಳಿಂದ ಹೆಚ್ಚಿನ ನಿರ್ಲಕ್ಷ್ಯಕ್ಕೆ ಒಳಗಾಗುತ್ತವೆ. ಆದ್ದರಿಂದ ಈ ನೀತಿಗಳ ವಿರುದ್ಧದ ಯಾವುದೇ ಪರಿಣಾಮಕಾರಿ ಪ್ರತಿಭಟನೆಗಳು ರಾಜಕೀಯ ಪಕ್ಷಗಳ ಚೌಕಟ್ಟಿನ ಆಚೆ ಸ್ವಸಮರ್ಥನೀಯ (ಪಟ್ಟು ಹಿಡಿದು ಕೂರುವ) ಕಾರ್ಯಗಳನ್ನು ಒಳಗೊಂಡಿರುತ್ತವೆ.

ಚಳುವಳಿಗಳೆಂದರೆ ಕೇವಲ ಸಾಮೂಹಿಕ ಹಕ್ಕು ಪ್ರತಿಪಾದನೆ ಅಥವಾ ಜಮಾವಣೆ ಮತ್ತು ಪ್ರತಿಭಟನೆಗಳು ಮಾತ್ರವಲ್ಲ. ಅದು ಒಂದೇ ರೀತಿಯ ಸಮಸ್ಯೆಗಳು, ಬೇಡಿಕೆಗಳು ಮತ್ತು ನಿರೀಕ್ಷೆಗಳನ್ನು ಹೊಂದಿದ ಜನರೆಲ್ಲರು ಒಟ್ಟುಗೂಡುವ ಅನುಕ್ರಮ ಪ್ರಕ್ರಿಯೆಯನ್ನೊಳಗೊಂಡಿದೆ. ಜೊತೆಗೆ, ಜನರು ತಮ್ಮ ಹಕ್ಕುಗಳನ್ನು ಅರಿಯುವಂತೆ ಮಾಡುವುದು ಮತ್ತು ಪ್ರಜಾಸತ್ತಾತ್ಮಕ ಸಂಸ್ಥೆಗಳ ನಿಟ್ಟಿನ ನಿರೀಕ್ಷೆಗಳ ಬಗೆಗೆ ಅವರಲ್ಲಿ ಜಾಗೃತಿ ಮೂಡಿಸುವುದೂ ಆಗಿದೆ. ಸಾಮಾಜಿಕ ಚಳುವಳಿಗಳು ಸುದೀರ್ಘ ಕಾಲದಿಂದ ಜನರಿಗೆ ಈ ರೀತಿಯ ಶಿಕ್ಷಣ ನೀಡುವಂತಹ ಕೆಲಸಗಳನ್ನು ನಿರ್ವಹಿಸುತ್ತಿದ್ದು, ಅಡಚಣೆಗಳನ್ನು ಉಂಟು ಮಾಡುವುದಕ್ಕಿಂತ ಹೆಚ್ಚಾಗಿ ಪ್ರಜಾಪ್ರಭುತ್ವದ ವ್ಯಾಪ್ತಿಯನ್ನು ಹಿಗ್ಗಿಸುತ್ತಿವೆ. ಅದಕ್ಕೆ ಮಾಹಿತಿ ಹಕ್ಕಿನ ಸಲುವಾಗಿ ನಡೆದ ಹೋರಾಟವೇ ಸಾಕ್ಷಿಯಾಗಿದೆ.

ಆದರೂ ಇಂತಹ ಚಳುವಳಿಗಳಿಂದ ಸಾರ್ವಜನಿಕ ನೀತಿಗಳ ಸ್ವರೂಪದ ಮೇಲೆ ಆಗುವ ನೈಜ ಪರಿಣಾಮವು ಹೆಚ್ಚು ಸೀಮಿತವಾಗಿದೆ. ಏಕೆಂದರೆ ಭಾಗಶಃ, ಸಮಕಾಲೀನ ಚಳುವಳಿಗಳಲ್ಲಿ ಹೆಚ್ಚಿನವು ಒಂದು ಸಮಸ್ಯೆಯ ಮೇಲೆ ಗಮನವನ್ನು ಕೇಂದ್ರೀಕರಿಸುತ್ತವೆಯಲ್ಲದೆ, ಸಮಾಜದ ಒಂದು ಭಾಗದ ಹಿತಾಸಕ್ತಿಯನ್ನು ಪ್ರತಿನಿಧಿಸುತ್ತವೆ. ಹೀಗಾಗಿ ಅವರ ನ್ಯಾಯಯುತ ಬೇಡಿಕೆಗಳನ್ನು ಕಡೆಗಣಿಸುವುದು ಸಾಧ್ಯವಾಗುತ್ತದೆ. ಪ್ರಜಾಸತ್ತಾತ್ಮಕ ರಾಜಕೀಯದಲ್ಲಿ ಅವಕಾಶವಂಚಿತರಾದ ಬೇರೆ ಬೇರೆ ಸಾಮಾಜಿಕ ಸಮುದಾಯಗಳನ್ನು ಒಳಗೊಂಡ ಒಂದು ವಿಶಾಲ ವ್ಯಾಪ್ತಿಯ ಒಕ್ಕೂಟವು ಅವಶ್ಯ. ಈ ಚಳುವಳಿಗಳ ನಾಯಕತ್ವದಲ್ಲಿ ಅಂತಹ ಒಗ್ಗೂಡುವಿಕೆಯು ರೂಪುಗೊಳ್ಳುತ್ತಿಲ್ಲವೆನಿಸುತ್ತದೆ. ರಾಜಕೀಯ ಪಕ್ಷಗಳು ವಿವಿಧ ವರ್ಗಗಳ ಹಿತಾಸಕ್ತಿಗಳನ್ನು ಒಂದೆಡೆ ಸೇರಿಸುವ ಪ್ರಯತ್ನ ಮಾಡಬೇಕಾಗುತ್ತದೆ, ಆದರೆ ಅವುಗಳಿಗೂ

ಹಾಗೆ ಮಾಡಲು ಸಾಧ್ಯವಾಗುತ್ತಿಲ್ಲವೆಂದು ತೋರುತ್ತದೆ. ಪಕ್ಷಗಳು ಅಂಚಿನಲ್ಲಿರುವ ಸಾಮಾಜಿಕ ಗುಂಪುಗಳ ಸಮಸ್ಯೆಗಳನ್ನು ನಿರ್ವಹಿಸುವಂತೆ ಕಾಣಿಸುತ್ತಿಲ್ಲ. ಈ ಸಮಸ್ಯೆಗಳನ್ನು ನಿರ್ವಹಿಸುವ ಚಳುವಳಿಗಳು ಹೆಚ್ಚು ನಿರ್ಬಂಧಿತ ರೀತಿಯಲ್ಲಿ ಕೆಲಸ ಮಾಡುತ್ತವೆ. ವರ್ಷಗಳು ಕಳೆದಂತೆ ಜನಾಂದೋಲನಗಳು ಮತ್ತು ರಾಜಕೀಯ ಪಕ್ಷಗಳ ನಡುವಿನ ಸಂಬಂಧವು ದುರ್ಬಲವಾಗುತ್ತಿದ್ದು, ರಾಜಕೀಯದಲ್ಲಿ ಅಭಾವವನ್ನು ಸೃಷ್ಟಿಸಿದೆ. ಇತ್ತೀಚಿನ ವರ್ಷಗಳಲ್ಲಿ ಇದು ಭಾರತದ ರಾಜಕೀಯದ ಒಂದು ದೊಡ್ಡ ಸಮಸ್ಯೆಯಾಗಿದೆ.

**ಅಭ್ಯಾಸಗಳು**

1. ಈ ಕೆಳಗಿನವುಗಳಲ್ಲಿ ಯಾವ ಹೇಳಿಕೆಯು ತಪ್ಪು ಎಂದು ಗುರುತಿಸಿ.
   ಚಿಪ್ಕೋ ಚಳುವಳಿಯು
   a. ಮರ ಕಡಿಯುವುದನ್ನು ತಡೆಯುವ ಒಂದು ಪರಿಸರವಾದಿ ಚಳುವಳಿಯಾಗಿದೆ.
   b. ಪರಿಸರಕ್ಕೆ ಮತ್ತು ಆರ್ಥಿಕ ಶೋಷಣೆಗೆ ಸಂಬಂಧಿಸಿದ ಪ್ರಶ್ನೆಗಳನ್ನು ಎತ್ತಿತು.
   c. ಕುಡಿತದ ವಿರುದ್ಧ ಮಹಿಳೆಯರು ಪ್ರಾರಂಭಿಸಿದ ಒಂದು ಚಳುವಳಿಯಾಗಿತ್ತು.
   d. ತಮ್ಮ ನೈಸರ್ಗಿಕ ಸಂಪನ್ಮೂಲಗಳ ಮೇಲೆ ಸ್ಥಳೀಯ ಸಮುದಾಯಗಳಿಗೆ ನಿಯಂತ್ರಣವಿರಬೇಕು ಎಂಬ ಬೇಡಿಕೆಯನ್ನು ಅದು ಮುಂದಿಟ್ಟಿತು.
2. ಈ ಕೆಳಗಿನ ಕೆಲವು ಹೇಳಿಕೆಗಳು ತಪ್ಪಾಗಿವೆ. ತಪ್ಪು ಹೇಳಿಕೆಗಳನ್ನು ಗುರುತಿಸಿ ಅವಶ್ಯಕ ತಿದ್ದುಪಡಿಗಳೊಂದಿಗೆ ಸರಿಪಡಿಸಿ ಬರೆಯಿರಿ.
   a. ಸಾಮಾಜಿಕ ಚಳುವಳಿಗಳು ಭಾರತದ ಪ್ರಜಾಪ್ರಭುತ್ವದ ಕಾರ್ಯನಿರ್ವಹಣೆಗೆ ಅಡಚಣೆಯುಂಟುಮಾಡುತ್ತಿವೆ.
   b. ವಿವಿಧ ಸಾಮಾಜಿಕ ವರ್ಗಗಳನ್ನೊಳಗೊಂಡ ಜನಸಮೂಹವನ್ನು ಆಧರಿಸಿರುವುದು ಸಾಮಾಜಿಕ ಚಳುವಳಿಗಳ ಪ್ರಮುಖ ಶಕ್ತಿಯೆನಿಸಿದೆ.
   c. ರಾಜಕೀಯ ಪಕ್ಷಗಳು ದೇಶದ ಬಹಳಷ್ಟು ವಿಷಯಗಳನ್ನು ನಿರ್ವಹಿಸದಿರುವುದು ಭಾರತದಲ್ಲಿ ಸಾಮಾಜಿಕ ಚಳುವಳಿಗಳ ಹುಟ್ಟಿಗೆ ಕಾರಣವೆನಿಸಿದೆ. .
3. ಉತ್ತರ ಪ್ರದೇಶದಲ್ಲಿ 1970ರ ಪ್ರಾರಂಭದಲ್ಲಿ ಚಿಪ್ಕೊ ಚಳುವಳಿಯ ಹುಟ್ಟಿಗೆ ಕಾರಣವಾದ ಅಂಶಗಳನ್ನು ಗುರುತಿಸಿ. ಈ ಚಳುವಳಿಯ ಪರಿಣಾಮವೇನು?
4. ಭಾರತೀಯ ಕಿಸಾನ್ ಒಕ್ಕೂಟವು ರೈತರ ಸ್ಥಿತಿಯತ್ತ ಬೆಳಕು ಬೀರಿದ ಒಂದು ಪ್ರಧಾನ ಸಂಘಟನೆಯಾಗಿದೆ. ತೊಂಬತ್ತರ ದಶಕದಲ್ಲಿ ಅದು ಉದ್ದೇಶಿಸಿದ ಸಮಸ್ಯೆಗಳು ಯಾವುವು ಮತ್ತು ಅವು ಎಷ್ಟರಮಟ್ಟಿಗೆ ಯಶಸ್ವಿಯಾದವು?
5. ಆಂಧ್ರಪ್ರದೇಶದ ಸಾರಾಯಿ ನಿಷೇಧದ ಚಳುವಳಿಯು ಕೆಲವು ಗಂಭೀರ ವಿಷಯಗಳತ್ತ ದೇಶದ ಗಮನವನ್ನು ಸೆಳೆಯಿತು. ಈ ವಿಷಯಗಳು ಯಾವುವು?
6. ಆಂಧ್ರಪ್ರದೇಶದ ಸಾರಾಯಿ ನಿಷೇಧ ಚಳುವಳಿಯನ್ನು ಒಂದು ಮಹಿಳಾ ಚಳುವಳಿಯನ್ನಾಗಿ ನೀವು ಪರಿಗಣಿಸುತ್ತೀರಾ? ಏಕೆ?
7. ನರ್ಮದಾ ಬಚಾವ್ ಆಂದೋಲನವು ನರ್ಮದಾ ಕಣಿವೆಯ ಅಣೆಕಟ್ಟು ಯೋಜನೆಗಳನ್ನು ಏಕೆ ವಿರೋಧಿಸಿತು?

8. ಒಂದು ದೇಶದಲ್ಲಿನ ಚಳುವಳಿಗಳು ಮತ್ತು ಪ್ರತಿಭಟನೆಗಳು ಪ್ರಜಾಪ್ರಭುತ್ವವನ್ನು ಬಲಪಡಿಸುತ್ತವೆಯೆ? ನಿಮ್ಮ ಉತ್ತರಗಳನ್ನು ಉದಾಹರಣೆಗಳೊಂದಿಗೆ ಸಮರ್ಥಿಸಿ.
9. ದಲಿತ್ ಪ್ಯಾಂಥರ್ಸ್ ಉದ್ದೇಶಿಸಿದ ವಿಷಯಗಳು ಯಾವುವು?
10. ಈ ಕೆಳಗಿನ ಭಾಗವನ್ನು ಓದಿ ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ.

    ...., ಹೆಚ್ಚುಕಡಿಮೆ ಎಲ್ಲಾ 'ಹೊಸ ಸಾಮಾಜಿಕ ಚಳುವಳಿಗಳು' ಪರಿಸರ ನಾಶ, ಮಹಿಳೆಯರ ಸ್ಥಾನಕ್ಕೆ ಚ್ಯುತಿ ತರುವುದು, ಆದಿವಾಸಿ ಸಂಸ್ಕೃತಿಗಳ ಅಳಿವು ಮತ್ತು ಮಾನವ ಹಕ್ಕುಗಳನ್ನು ಕಡೆಗಣಿಸುವುದು ಮುಂತಾದ ಹೊಸ ಸಮಸ್ಯೆಗಳನ್ನು ಸರಿಪಡಿಸುವ ಯತ್ನಗಳಾಗಿ ಹೊರಹೊಮ್ಮಿವೆ. ಅವುಗಳಲ್ಲಿ ಯಾವುದಕ್ಕೂ ಅವುಗಳಲ್ಲಿಯೇ ಅಂತರ್ಗತವಾದ, ಸಾಮಾಜಿಕ ವ್ಯವಸ್ಥೆಯನ್ನು ಪರಿವರ್ತನೆ ಮಾಡುವಂತಹ ಸ್ವರೂಪವಿಲ್ಲ. ಆ ರೀತಿಯಲ್ಲಿ ಹಿಂದಿನ ಕ್ರಾಂತಿಕಾರಿ ಸಿದ್ಧಾಂತಗಳಿಗಿಂತ ಇವು ಭಿನ್ನವಾಗಿವೆ. ಆದರೆ ಅವು ಬಹಳಷ್ಟು ಛಿದ್ರಗೊಂಡಿರುವುದೇ ಅವುಗಳ ದೌರ್ಬಲ್ಯವಾಗಿದೆ. ...... .... .......ಹೊಸ ಸಾಮಾಜಿಕ ಚಳುವಳಿಗಳು ಆಕ್ರಮಿಸಿಕೊಂಡಿರುವ ದೊಡ್ಡ ಭಾಗವು ಬಳಲುತ್ತಿದೆ ಎನಿಸುತ್ತಿದೆ... ಅವು ಜನತೆಯ ಒಂದು ಸಶಕ್ತ ಮತ್ತು ಒಗ್ಗೂಡಿದ ಚಳುವಳಿಯಾಗಿ ಹೊರಹೊಮ್ಮದೇ ಸಮಾಜದಲ್ಲಿ ನಿಜವಾಗಿ ಶೋಷಣೆಗೆ ಒಳಪಟ್ಟವರು ಮತ್ತು ಬಡವರಿಗೆ ಪ್ರಸ್ತುತವಾಗದಂತೆ ತಡೆಯುವ ಅನೇಕ ಗುಣಲಕ್ಷಣಗಳಿಂದ... ಅತಿಯಾಗಿ ಛಿದ್ರಗೊಂಡಿವೆ, ಅತಿಯಾಗಿ ಪ್ರತಿಕ್ರಿಯಾತ್ಮಕವಾಗಿವೆ, ತಾತ್ಕಾಲಿಕ ಪರಿಹಾರ ನೀಡುತ್ತವೆ ಹಾಗೂ ಸಮಾಜದ ಮೂಲಭೂತ ಬದಲಾವಣೆಗೆ ಒಂದು ಸಮಗ್ರ ಚೌಕಟ್ಟನ್ನು ಒದಗಿಸುತ್ತಿಲ್ಲ. ಅದನ್ನು-ವಿರೋಧಿಸುತ್ತವೆ... ಇದನ್ನು ವಿರೋಧಿಸುತ್ತವೆ... ಎಂಬುದು (ಪಶ್ಚಿಮ ವಿರೋಧಿ, ಬಂಡವಾಳಶಾಹಿ ವಿರೋಧಿ, ಅಭಿವೃದ್ಧಿ ವಿರೋಧಿ ಇತ್ಯಾದಿ) ಅವುಗಳನ್ನು ಸುಸಂಬದ್ಧಗೊಳಿಸುವುದಿಲ್ಲ, ಮತ್ತು ಶೋಷಿತರಾದ, ಅಂಚಿಗೆ ತಳ್ಳಲ್ಪಟ್ಟ ಸಮುದಾಯಗಳಿಗೆ ಅವು ಪ್ರಸ್ತುತ ಎನಿಸಿಕೊಳ್ಳುವುದಿಲ್ಲ. –ರಜನಿ ಕೊಠಾರಿ

    a. ಹೊಸ ಸಾಮಾಜಿಕ ಚಳುವಳಿಗಳಿಗೂ ಕ್ರಾಂತಿಕಾರಿ ಸಿದ್ಧಾಂತಗಳಿಗೂ ಏನು ವ್ಯತ್ಯಾಸ?
    b. ಲೇಖಕರ ಪ್ರಕಾರ ಸಾಮಾಜಿಕ ಚಳುವಳಿಗಳ ಮಿತಿಗಳೇನು?
    c. ಸಾಮಾಜಿಕ ಚಳುವಳಿಗಳು ನಿರ್ದಿಷ್ಟ ಸಮಸ್ಯೆಗಳನ್ನು ಉದ್ದೇಶಿಸುತ್ತವೆ ಎನ್ನುವುದಾದರೆ, ಅವು 'ಛಿದ್ರಗೊಂಡಿವೆ' ಎನ್ನುತ್ತೀರಾ ಅಥವಾ ಅವು ಹೆಚ್ಚು ಕೇಂದ್ರಿತವಾಗಿವೆ ಎನ್ನುತ್ತೀರಾ? ಉದಾಹರಣೆಗಳೊಂದಿಗೆ ನಿಮ್ಮ ಉತ್ತರಗಳಿಗೆ ಕಾರಣ ನೀಡಿ.

**ಜೊತೆಗೂಡಿ ನಿರ್ವಹಿಸೋಣ**

ವಾರ್ತಾಪತ್ರಿಕೆಯ ವರದಿಗಳನ್ನು ಒಂದು ವಾರದವರೆಗೆ ಅನುಸರಿಸಿ, ನೀವು 'ಜನಾಂದೋಲನಗಳು' ಎಂದು ವರ್ಗೀಕರಿಸಬಹುದಾದ ಯಾವುದೇ ಮೂರು ಸುದ್ದಿಗಳನ್ನು ಗುರುತಿಸಿ. ಆ ಚಳುವಳಿಗಳ ಮುಖ್ಯ ಬೇಡಿಕೆಗಳನ್ನ, ತಮ್ಮ ಬೇಡಿಕೆಗಳು ಈಡೇರುವಂತೆ ಅವು ಅನುಸರಿಸಿದ ವಿಧಾನಗಳನ್ನು ಮತ್ತು ಈ ಬೇಡಿಕೆಗಳಿಗೆ ರಾಜಕೀಯ ಪಕ್ಷಗಳು ಹೇಗೆ ಪ್ರತಿಕ್ರಿಯಿಸಿದವು ಎಂಬುದನ್ನು ಕಂಡುಹಿಡಿಯಿರಿ.